ಬಾ ಮತ್ತು ಬಾಪು 150ನೇ ವರ್ಷಾಚರಣೆ – ಪುಸ್ತಕ ಮಾಲಿಕೆ

## ಕರ್ನಾಟಕದ ಕಸ್ತೂರ್‌ಬಾ

# ಯಶೋಧರಮ್ಮ ದಾಸಪ್ಪ



ಲೇಖಕಿ : ಲೀಲ ವಾಸುದೇವ್

ಬಾ-ಬಾಪು 150ನೇ




ವರ್ಷಾಚರಣೆ ಪುಸ್ತಕ ಮಾಲಿಕೆ

## ಕರ್ನಾಟಕದ ಕಸ್ತೂರ್‌ಬಾ

# ಯಶೋಧರಮ್ಮ ದಾಸಪ್ಪ

ಲೇಖಕಿ : ಲೀಲ ವಾಸುದೇವ್

ಪ್ರಕಾಶಕರು

**ಕರ್ನಾಟಕ ಗಾಂಧೀ ಸ್ಮಾರಕ ನಿಧಿ**

ಗಾಂಧೀ ಭವನ, ಕುಮಾರ ಪಾರ್ಕ್ ಪೂರ್ವ

ಬೆಂಗಳೂರು - 560001, ದೂರವಾಣಿ : 080-22261967

Karnatakada Kasturba - Yashodaramma Dasappa
Written by : **Leela Vasudev**
Published by **Karnataka Gandhi Smaraka Nidhi**
Gandhi Bhavana, Kumara Park East
Bengaluru - 560001
Phone : 080-22261967

| | | |
|---|---|---|
| ಮೊದಲ ಮುದ್ರಣ | : | 2018 |
| ಪ್ರತಿಗಳು | : | 1000 |
| ಪುಟಗಳು | : | XIV + 46 |
| ಬೆಲೆ | : | 38/- |
| ಮುದ್ರಕರು | : | ಕ್ರಿಯೇಟಿವ್‌ಗೀಕ್ಸ್<br>ಯಾದವ ಕಾಲೇಜು ರಸ್ತೆ, ಮಾಧವನಗರ<br>ಬೆಂಗಳೂರು – 560001<br>ದೂರವಾಣಿ : 080 40927049 |



# ಅರ್ಪಣೆ

**ಶೈಕ್ಷಣಿಕ ಹಾಗೂ ಸಾಮಾಜಿಕ ಕ್ಷೇತ್ರದಲ್ಲಿ ಸಕ್ರಿಯರಾಗಿ**
**ನನಗೆ ಮಾತೃಶ್ರೀಯಂತಿರುವ ಹಿರಿಯಕ್ಕ**

## ಎಂ.ಜೆ. ಇಂದಿರಮ್ಮ ಅವರಿಗೆ



ರಕ್ತವಿಲ್ಲದೆ ದೇಹವು ಹೇಗೆ ಬದುಕಲು ಸಾಧ್ಯವಿಲ್ಲವೋ
ಹಾಗೆಯೇ ಶ್ರದ್ಧೆ ಮತ್ತು ಪ್ರಾರ್ಥನೆಗಳಿಲ್ಲದೆ
ಆತ್ಮವೂ ಕೂಡ ಬದುಕಲು ಸಾಧ್ಯವಿಲ್ಲ !

- ಮಹಾತ್ಮ ಗಾಂಧೀಜಿ

# ಮೊದಲ ಮಾತು

ಬಾ ಮತ್ತು ಬಾಪು 150ನೇ ವರ್ಷಾಚರಣೆಯ ಸಂದರ್ಭದಲ್ಲಿ ಯಶೋಧರಮ್ಮ ದಾಸಪ್ಪ ಅವರ ಕುರಿತಾದ ಕೃತಿಯನ್ನು ಗಾಂಧಿ ಭವನದಿಂದ ಪ್ರಕಟಿಸಲು ನನಗೆ ಅತ್ಯಂತ ಸಂತೋಷವಾಗುತ್ತದೆ. ಗಾಂಧೀಜಿ ಅವರ ಅನುಯಾಯಿಯಗಿ ವಾರ್ಧಾ ಆಶ್ರಮದಲ್ಲಿ ಸೇವೆಯ ಪಣತೊಟ್ಟು, ಸರಳ ಶಿಸ್ತಿನ ಜೀವನಕ್ಕೆ ತಾನೇ ನಿದರ್ಶನವಾಗುತ್ತಾ, ಸಮಾಜ ಪರಿವರ್ತನಾ ಕಾರ್ಯದಲ್ಲಿ ಅಜೀವ ಪರ್ಯಂತ ದುಡಿದ ಯಶೋದರಮ್ಮ ಅವರ ಜೀವನ ಸರ್ವರಿಗೂ ಮಾದರಿಯಾಗಿದೆ. ಇಂಥಹ ಸಮಾಜ ಜೀವಿಯ ಪರಿಚಯಾತ್ಮಕ ಕೃತಿಯನ್ನು ಶ್ರೀಮತಿ ಲೀಲಾ ವಾಸುದೇವ್ ಅವರು ಬರೆದು ಗಾಂಧಿ ಭವನದಿಂದ ಪ್ರಕಟಣೆಗಾಗಿ ಪ್ರೀತಿಯಿಂದ ಕೊಟ್ಟಿರುವುದಕ್ಕೆ ನಾನು ಅವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಕರ್ನಾಟಕದಲ್ಲಿ ಯಶೋದರಮ್ಮ ಅವರು ಹಲವು ಪ್ರಥಮಗಳಿಗೆ ನಾಂದಿ ಆಗಿದ್ದಾರೆ. ಮೈಸೂರು ಪುರಸಭೆಗೆ ಬಹುಮತದಿಂದ ಆಯ್ಕೆಯಾದ ಪ್ರಥಮ ಮಹಿಳಾ ಪ್ರತಿನಿಧಿ, ಮೈಸೂರು ನ್ಯಾಯಾ ವಿಧಾಯಕ ಸಭೆಗೆ ಪ್ರಥಮ ಮಹಿಳಾ ಪ್ರತಿನಿಧಿ, ಮೈಸೂರು ಸಂಸ್ಥಾನದ ಕಾಂಗ್ರೆಸ್ಸಿಗೆ ಪ್ರಥಮ ಮಹಿಳಾ ಅಧ್ಯಕ್ಷರು ಹಾಗೂ ಅರಸೀಕೆರೆಯಲ್ಲಿ ವಾರ್ಧ ಆಶ್ರಮದಂತೆ, ಆಶ್ರಮವನ್ನು ಸ್ಥಾಪಿಸಿ ಗ್ರಾಮೀಣ ಮಹಿಳಾಭಿವೃದ್ಧಿಗೆ ಶ್ರಮಿಸಿದ ಪ್ರಥಮ ಮಹಿಳೆ ಆಗಿದ್ದಾರೆ. ಹಾಗೂ ಕಸ್ತೂರ್‌ಬಾ ಗಾಂಧಿ ರಾಷ್ಟ್ರೀಯ ಸ್ಮಾರಕ ಟ್ರಸ್ಟ್‌ನ ಕರ್ನಾಟಕದ ಏಕೈಕ ಪ್ರತಿನಿಧಿಯಾಗಿ ಯಶೋಧರಮ್ಮ ಅವರನ್ನು ಗಾಂಧೀಜಿಯವರೇ ನಾಮ ನಿರ್ದೇಶನ ಮಾಡಿರುವುದು ಆಕೆಯ ಕರ್ತೃತ್ವ ಶಕ್ತಿಯಲ್ಲಿ ಮಹಾತ್ಮಾಜೀ ಅವರಿಗಿದ್ದ ಅಚಲ ವಿಶ್ವಾಸದ ದ್ಯೋತಕವಾಗಿದೆ.

ಇಂಥಹ ಉದಾತ್ತ ಜೀವಿಯ ತ್ಯಾಗ – ಸೇವೆ, ಶಿಸ್ತಿನ ಜೀವನ, ನಮ್ಮ ಯುವಜನರಿಗೆ ಅತ್ಯುತ್ತಮ ಮಾದರಿಯಾಗಿದೆ. ಕರ್ನಾಟಕದ ಅರಸೀಕೆರೆಯಲ್ಲಿ, ಇಂದಿಗೂ, ಯಶೋದರಮ್ಮ ಅವರು ಸ್ಥಾಪಿಸಿ, ಬಹುಕಾಲ ಅದನ್ನು ನಡೆಸಿದ ಸೇವಾಶ್ರಮ ಅವರ ಜೀವನದ ಆಶಯದಂತೆ

ಕಾರ್ಯನಿರ್ವಹಣೆಯಲ್ಲಿ ತೊಡಗಿರುವುದು ಪ್ರತ್ಯಕ್ಷ ಸಾಕ್ಷ್ಯವಾಗಿದೆ. ಕೃತಿಕಾರರು ಅರಸೀಕೆರೆಯ ಕಸ್ತೂರ್‌ಬಾ ಆಶ್ರಮದ ಭಾವಚಿತ್ರಗಳೊಂದಿಗೆ ಅಲ್ಲಿನ ದೈನಂದಿನ ಕಾರ್ಯ ನಿರ್ವಹಣೆಯ ವಿಚಾರಗಳನ್ನು ತಿಳಿಸಿರುವುದು ಶ್ಲಾಘನೀಯವಾಗಿದೆ.

ಇಂಥಹ ಅನುಕರಣೀಯ ವ್ಯಕ್ತಿತ್ವದ ಯಶೋದರಮ್ಮ ಅವರ ಕೃತಿಯನ್ನು ಗಾಂಧಿ ಭವನದಿಂದ ಪ್ರಕಟಣೆಗಾಗಿ ಸಜ್ಜುಗೊಳಿಸಿದ, ಕಾರ್ಯದರ್ಶಿ ಶ್ರೀಮತಿ ಇಂದಿರಾ ಕೃಷ್ಣಪ್ಪ ಅವರಿಗೆ ಧನ್ಯವಾದಗಳು. ಈ ಕೃತಿಯನ್ನು ಪ್ರಕಟಿಸಲು, ಅನುಮೋದನೆ ನೀಡಿದ ಗಾಂಧಿ ಭವನದ ಉಪಾಧ್ಯಕ್ಷರುಗಳಿಗೆ ಸದಸ್ಯರುಗಳಿಗೆ ಕೃತಜ್ಞತೆಗಳನ್ನು ತಿಳಿಸುತ್ತೇನೆ. ಈ ಕೃತಿಗಾಗಿ ಭಾವಚಿತ್ರಗಳನ್ನು ಮತ್ತು ಹಲವು ಹತ್ತು ಮಾಹಿತಿಗಳನ್ನು ನೀಡಿದ ಶ್ರೀಮತಿ ಸರೋಜಮ್ಮ ತುಳಸೀ ದಾಸಪ್ಪ ಮತ್ತು ಮೊಮ್ಮಗ ಶ್ರೀ ಅಮರೇಶ್ ದಾಸ್ ಇವರಿಗೆ ಅಭಿನಂದನೆಗಳು. ಈ ಕಿರುಪುಸ್ತಕವನ್ನು ಅಂದವಾದ ವಿನ್ಯಾಸದೊಂದಿಗೆ ಮುದ್ರಿಸಿದ ಕ್ರಿಯೇಟಿವ್‌ಗೀಕ್ಸ್‌ನ ಮಹೇಶ್ ಮತ್ತು ಅವರ ತಂಡದವರಿಗೆ ಗಾಂಧೀ ಭವನದ ಪರವಾಗಿ ನಮನಗಳು ಸಲ್ಲುತ್ತವೆ.

ಡಾ. ವೂಡೇ ಪಿ. ಕೃಷ್ಣ
ಅಧ್ಯಕ್ಷರು
ಕ.ಗಾಂ.ಸ್ಮಾ.ನಿ.

---

"ಯಶೋಧರಾ ತುಂ ಗಂಗಾ ಬನ್ ಗಯೀ"

- ಆಚಾರ್ಯ ಕೃಪಲಾನಿ
(ಗಾಂಧಿ ಸ್ಮಾರಕ ನಿಧಿಯ ಸಭೆಯಲ್ಲಿ
ಯಶೋಧರಮ್ಮ ಅವರನ್ನು ಕುರಿತು ಹೇಳಿದ ಮಾತು)

# ನಮ್ಮ ನಮ್ಮಲ್ಲಿ

ಬಾ ಮತ್ತು ಬಾಪು 150ನೇ ವರ್ಷಾಚರಣೆಯ ಸುಸಂದರ್ಭದಲ್ಲಿ ಕರ್ನಾಟಕ ಕಸ್ತೂರ್‌ಬಾ ಎಂದೇ ಜನಮಾನಸದಲ್ಲಿ ಪ್ರತಿಷ್ಠಾಪಿತರಾಗಿರುವ ಶ್ರೀಮತಿ ಯಶೋಧರಮ್ಮ ದಾಸಪ್ಪ ಅವರನ್ನು ಪರಿಚಯಿಸುವ ಕಿರುಹೊತ್ತಿಗೆಯನ್ನು ಪ್ರಕಟಿಸಲು ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಹರ್ಷಿಸುತ್ತದೆ. ಮಹಾತ್ಮ ಗಾಂಧೀಜಿ ಅವರ ಅನುಯಾಯಿಯಾಗಿ, ಕಸ್ತೂರಬಾ ಅವರ ಒಡನಾಡಿಯಾಗಿ ಗಾಂಧೀಜಿ ಅವರ ರಚನಾತ್ಮಕ ಕಾರ್ಯಗಳನ್ನು ಕರ್ನಾಟಕದಲ್ಲಿ ಅನುಷ್ಠಾನಗೊಳಿಸಲು ಕಂಕಣಬದ್ಧರಾಗಿ ಶ್ರಮಿಸಿದ ಯಶೋಧರಮ್ಮ ಅವರ ಜೀವನ ಚಿತ್ರಣದ ಯಶೋಗಾಥೆಯನ್ನು ಈ ಕೃತಿ ಅನಾವರಣಗೊಳಿಸುತ್ತದೆ. ಯಶೋಧರಮ್ಮ ಅವರನ್ನು ಅಪಾರವಾಗಿ ಪ್ರೀತಿಸುವ ಶ್ರೀಮತಿ ಲೀಲ ವಾಸುದೇವ್ ಇವರು, ಹತ್ತಿರದ ಸಂಬಂಧಿಗಳಿಂದ, ಬಂಧು ಬಳಗದವರಿಂದ ಮಾಹಿತಿಯನ್ನು, ಭಾವಚಿತ್ರಗಳನ್ನು ಸಂಗ್ರಹಿಸಿ, ಈ ಕೃತಿಯನ್ನು ರಚಿಸಿರುವುದರಿಂದ ಮಹಿಳಾ ಸ್ವಾತಂತ್ರ್ಯ ಹೋರಾಟಗಾರರ ಅಧಿಕೃತ ಕೃತಿಗಳಲ್ಲಿ ಇದು ಒಂದಾಗಿದೆ.

ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ತನುಮನಧನದೊಂದಿಗೆ ಮತ್ತು ತ್ಯಾಗ-ಬಲಿದಾನದಿಂದ ದುಡಿದ ಲಕ್ಷಾಂತರ ಮಹಿಳಾ ಹೋರಾಟಗಾರರ ಮಾಹಿತಿ, ಜೀವನ ಚಿತ್ರಣ ಇಂದಿಗೂ ಪರಿಪೂರ್ಣವಾಗಿ ಸಂಗ್ರಹವಾಗಿಲ್ಲದಿರುವುದು ಸಮಾಜದಲ್ಲಿ ಮಹಿಳೆಯರ ಬಗೆಗಿರುವ ಅವಜ್ಞೆಯನ್ನು ಅಭಿವ್ಯಕ್ತಪಡಿಸುತ್ತದೆ. ಅಂಥಹ ಸಂದರ್ಭದಲ್ಲಿ ಕೋಲ್ಮಿಂಚಂತೆ ಒದಗಿ ಬರುವ, ಇಂಥಹ ಕೃತಿಗಳು, ಮಹಿಳಾ ಸ್ವಾತಂತ್ರ್ಯ ಹೋರಾಟಗಾರರ ಸಮಾಜ ಸುಧಾರಕರ, ಸರಳ ಸಜ್ಜನಿಕೆಯ ಮಹಿಳೆಯರ ಘನವ್ಯಕ್ತಿತ್ವವನ್ನು ಅನಾವರಣಗೊಳಿಸಿದರೆ ರಾಜಕೀಯ ಸಾಮಾಜಿಕ ಕ್ಷೇತ್ರದಲ್ಲಿ ತೊಡಗುವ ಮಹಿಳೆಯರಿಗೆ ಸ್ಫೂರ್ತಿಯ ವೇದಿಕೆಯಾಗುತ್ತದೆ. ಯಶೋಧರಮ್ಮ ಅವರು ಕರ್ನಾಟಕದ ಅರಸೀಕೆರೆಯಲ್ಲಿ ಕಸ್ತೂರ್‌ಬಾ ಅವರ ಹೆಸರಿನಲ್ಲಿ ಆಶ್ರಮವನ್ನು ಸ್ಥಾಪಿಸಿ, ಸರಳ – ಶಿಸ್ತಿನ ಜೀವನ ಮತ್ತು ಗ್ರಾಮೀಣ ಮಹಿಳಾಭಿವೃದ್ಧಿಯ ಧ್ಯೇಯವಾಗಿರಿಸಿಕೊಂಡು ದುಡಿದ ಆಶ್ರಮ ಇಂದಿಗೂ ಅವರ ಹೆಸರನ್ನು ಚಿರಸ್ಮರಣೆಯಾಗಿರುವಂತೆ

ಕಾರ್ಯನಿರತವಾಗಿದೆ. ರಾಜಕೀಯದಲ್ಲಿ ಆದರ್ಶವಾದ ನಾಯಕತ್ವ, ಸಾಮಾಜಿಕವಾಗಿ ತ್ಯಾಗ, ನಿಸ್ವಾರ್ಥತೆಯ ಬದುಕು, ಶೈಕ್ಷಣಿಕವಾಗಿ ಹಲವು ಪ್ರಥಮಗಳ ಅಧ್ವರ್ಯರು, ಭಾರತದ ಸ್ವಾತಂತ್ರ್ಯ ಹೋರಾಟದ ಅಪ್ರತಿಮ ಮಹಿಳೆಯಾಗಿರುವ ಯಶೋದರಮ್ಮ ಇವರ ಜೀವನ ಕರ್ನಾಟಕದ ಇತಿಹಾಸದ ಪುಟಗಳನ್ನು ಅವಿಸ್ಮರಣೀಯಗೊಳಿಸಿದೆ. ಪಾನ ನಿರೋಧ, ಕಾಯ್ದೆಯನ್ನು ಜಾರಿಗೊಳಿಸಲು ವಿಫಲವಾದ ಸರ್ಕಾರದ ನೀತಿಯ ವಿರುದ್ಧ ಪ್ರತಿಭಟನಾತ್ಮಕವಾಗಿ, ಮಂತ್ರಿ ಪದವಿಗೆ ರಾಜೀನಾಮೆ ನೀಡಿದ ಪ್ರಥಮ ಸಚಿವೆ ಇವರಾಗಿದ್ದಾರೆ. ಅಖಿಲ ಭಾರತ ಗಾಂಧಿ ಸ್ಮಾರಕ ನಿಧಿಯ ಪ್ರಥಮ ಮಹಿಳಾ ಧರ್ಮದರ್ಶಿಯಾಗಿ ನಾಮ ನಿರ್ದೇಶನವಾಗಿರುವುದು ಸಹ ಆಕೆಗೆ ಸಂದ ಗೌರವವೇ ಆಗಿದೆ. ಕನ್ನಡದ ಸುಪ್ರಸಿದ್ಧ ಸಾಹಿತಿಗಳಾದ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರಿಂದ 'ಕರ್ನಾಟಕದ ಕಸ್ತೂರ್‌ಬಾ' ಎಂಬ ಗೌರವಕ್ಕೆ ಪಾತ್ರರಾದ ಆದರ್ಶ ವ್ಯಕ್ತಿತ್ವ ಇವರದಾಗಿದೆ. ಇಂಥಹ ಕಿರುಕೃತಿಯನ್ನು ಗಾಂಧಿ ಭವನದಿಂದ ಪ್ರಕಟಿಸಲು ಕೊಟ್ಟಂತಹ ಶ್ರೀಮತಿ ಲೀಲ ವಾಸುದೇವ್ ಇವರಿಗೆ ಗೌರವಾಭಿನಂದನೆಗಳನ್ನು ತಿಳಿಸುತ್ತೇನೆ. ಗಾಂಧಿ ಭವನದ ಅಧ್ಯಕ್ಷರಾದ ಡಾ. ವೂಡೇ ಪಿ. ಕೃಷ್ಣ ಅವರು, ಇಂಥಹ ಮಹಿಳಾ ಸಬಲೀಕರಣದ ಕಾರ್ಯಗಳಿಗೆ ಸದಾ ಪ್ರೋತ್ಸಾಹ ನೀಡುತ್ತಾ ಮುನ್ನುಡಿಯನ್ನು ಬರೆದು ಸಹಕರಿಸಿರುವುದಕ್ಕೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಕರ್ನಾಟಕದ ಘನತೆಗೆ ಕೀರಿಟಪ್ರಾಯದ ವ್ಯಕ್ತಿತ್ವದ ಶ್ರೀಮತಿ ಯಶೋದರಮ್ಮ ದಾಸಪ್ಪ ಅವರ ಸೊಸೆಯಾಗಿರುವ ಶ್ರೀಮತಿ ಸರೋಜಮ್ಮ, ಮೊಮ್ಮಗ ಶ್ರೀ ಅಮರೇಶ್ ದಾಸ್ ಇವರು ಹಲವು ರೀತಿಯಲ್ಲಿ ಈ ಕೃತಿ ಪ್ರಕಟಣೆಗೊಳ್ಳಲು ನೆರವು ನೀಡಿದ್ದಾರೆ. ಅವರಿಗೆ ನಮನಗಳನ್ನು ತಿಳಿಸುತ್ತೇನೆ. ಅಲ್ಪಾವಧಿಯಲ್ಲಿ ಈ ಕೃತಿಯನ್ನು ಅಂದವಾದ ವಿನ್ಯಾಸದೊಂದಿಗೆ ಮುದ್ರಿಸಿದ ಕ್ರಿಯೇಟಿವ್‌ಗೀಕ್ಸ್‌ನ ಮಹೇಶ್ ಮತ್ತು ಅವರ ತಂಡದವರಿಗೆ ಗಾಂಧೀ ಭವನದ ಪರವಾಗಿ ನಮನಗಳು ಸಲ್ಲುತ್ತವೆ.

ಇಂದಿರಾ ಕೃಷ್ಣಪ್ಪ
ಗೌ. ಕಾರ್ಯದರ್ಶಿ
ಕ.ಗಾಂ.ಸ್ಮಾ.ನಿ.

# ನಿವೇದನೆ

ಚಿಕ್ಕಮಕ್ಕಳ ಮನಸ್ಸಿನ ಮೇಲೆ 'ಕಸ್ತೂರ ಬಾ' ರವರ ಪ್ರಭಾವವು ಬೀರಲೆಂದು "ಮಕ್ಕಳ ಕಸ್ತೂರ್‌ಬಾ" ಎಂಬ ಒಂದು ಸಣ್ಣ ಪುಸ್ತಕವನ್ನು ಬರೆದೆ. ಈ 'ಮಕ್ಕಳ ಕಸ್ತೂರ ಬಾ' ಪುಸ್ತಕವು 2015 ರಲ್ಲಿ ಗಾಂಧೀ ಭವನದ 'ಕಸ್ತೂರ ಬಾ ಸಭಾಂಗಣ'ದಲ್ಲಿ ಲೋಕಾರ್ಪಣೆಯಾಯಿತು ಎಂಬುದು ನನಗೆ ಹೆಮ್ಮೆಯ ವಿಷಯ.

ಈ ಪುಸ್ತಕವನ್ನು ಬಿಡುಗಡೆ ಮಾಡಿದ ಡಾ. ವೂಡೆ ಪಿ.ಕೃಷ್ಣ ಅವರು, ಪುಸ್ತಕದಲ್ಲಿದ್ದ ಯಶೋಧರಮ್ಮ ದಾಸಪ್ಪ ಅವರ ಚಿತ್ರವನ್ನು ನೋಡಿ ಸಂತೋಷಪಟ್ಟು, "ಯಶೋಧರಮ್ಮ ಅವರ ಬಗ್ಗೆಯೂ ಒಂದು ಸಣ್ಣ ಪುಸ್ತಕವನ್ನು ಬರೆಯಬಹುದಾಗಿತ್ತಲ್ಲ, ದೊಡ್ಡ ದೊಡ್ಡ ಪುಸ್ತಕಗಳನ್ನು ಓದುವವರು ಬಹಳ ವಿರಳ. ಸಣ್ಣಪುಸ್ತಕಗಳು ಮಕ್ಕಳಿಗೆ ಅನುಕೂಲವಾಗುತ್ತದೆ" ಎಂಬ ತಮ್ಮ ಅಭಿಪ್ರಾಯವನ್ನು ವೇದಿಕೆಯ ಮೇಲೆ ವ್ಯಕ್ತ ಪಡಿಸಿದರು.

ಗಾಂಧೀ ಶಾಂತಿ ಪ್ರತಿಷ್ಠಾನದ ಸದಸ್ಯಳಾಗಿರುವ ನಾನು ಅಂದಿನ ಅಧ್ಯಕ್ಷರಾಗಿದ್ದ ಡಾ. ಹೊ. ಶ್ರೀನಿವಾಸಯ್ಯನವರಿಗೆ ಈ ವಿಚಾರವನ್ನು ತಿಳಿಸಿದೆ. ಆಗ ಅವರು "ಗಾಂಧೀ ಶಾಂತಿ ಪ್ರತಿಷ್ಠಾನದ ವತಿಯಿಂದ ಮುದ್ರಿಸಲಾಗುವುದಿಲ್ಲ. ನೀನು ಬರೆದು ಪೂರೈಸು ಗಾಂಧೀ ಸ್ಮಾರಕ ನಿಧಿಯಿಂದ ಮಾಡಿಸೋಣ ಎಂದರು." ಆ ಕನಸು ಇಂದು ನನಸಾಗುತ್ತಿದೆ.

ಗುರು ಶಿಷ್ಯರ ಜೋಡಿಯಂತಿದ್ದ ಹಿಂದಿನ ಅಧ್ಯಕ್ಷರಾಗಿದ್ದ ದಿವಂಗತ ಡಾ. ಹೊ. ಶ್ರೀನಿವಾಸಯ್ಯ ಅವರು ಹಾಗೂ ಪ್ರಸ್ತುತ ಅಧ್ಯಕ್ಷರಾದ ಡಾ. ವೂಡೇ ಪಿ. ಕೃಷ್ಣ ಅವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು. ಈ ಪುಸ್ತಕವನ್ನು ಹೊರತರಲು ಬೇಕಾದ ಚಿತ್ರಗಳನ್ನು ಸಕಾಲಕ್ಕೆ ಒದಗಿಸಿ ನೆರವು ನೀಡಿದ ಶ್ರೀಮತಿ ಸರೋಜಮ್ಮ ತುಳಸೀದಾಸ್ ಹಾಗೂ ಅವರ ಪುತ್ರ ಅಮರೇಶ್ ದಾಸ್ ಅವರಿಗೆ ನನ್ನ ಅನಂತ ವಂದನೆಗಳು.

ಗಾಂಧಿ ಭವನದ ಪತಿಯಿಂದ ಈ ಕಿರುಹೊತ್ತಿಗೆಯನ್ನು ಪ್ರಕಟಿಸುತ್ತಿರುವ ಅಧ್ಯಕ್ಷರಾದ ಡಾ. ವೂಡೇ ಪಿ. ಕೃಷ್ಣ ಅವರಿಗೂ ಹಾಗೂ ಗೌ॥ ಕಾರ್ಯದರ್ಶಿಗಳಾದ ಇಂದಿರಾ ಕೃಷ್ಣಪ್ಪ ಅವರಿಗೂ ನನ್ನ ಅನಂತಾನಂತ ಧನ್ಯವಾದಗಳು. ಕನ್ನಡದ ಅಚ್ಚೊತ್ತನ್ನು ಅಚ್ಚುಕಟ್ಟಾಗಿ ಮಾಡಿ, ಶ್ರಮವಹಿಸಿ ಸಿದ್ದಪಡಿಸಿಕೊಟ್ಟ ಶ್ರೀಮತಿ ಗೀತಾ ರಘು ಅವರಿಗೆ ನನ್ನ ಅನಂತ ಧನ್ಯವಾದಗಳು.

ಗಾಂಧೀಜಿ ಅವರ ನೆಚ್ಚಿನ ಅನುಯಾಯಿಯಾಗಿ, ಸ್ವಾತಂತ್ರ್ಯ ಹೋರಾಟದ ನಾಯಕಿಯಾಗಿ, ನಿಷ್ಠಾವಂತ ಸಚಿವರಾಗಿ, ಮಮತಾಮಯಿ ತಾಯಿಯಾಗಿ, ಹಿಂದುಳಿದ ಜನಾಂಗದ ಹಾಗೂ ನಿರ್ಗತಿಕ ಮಹಿಳೆಯರ ಆಧಾರ ಸ್ತಂಭವಾಗಿ, ನಿರ್ವಹಿಸಿದ ಕ್ಷೇತ್ರಗಲ್ಲಿ ಲೋಪವಿಲ್ಲದೆ ಕರ್ತವ್ಯ ನಿರ್ವಹಿಸಿ "ಕರ್ನಾಟಕದ ಕಸ್ತೂರ್‌ಬಾ" ಎನಿಸಿಕೊಂಡ ಕನ್ನಡದ ದಿಟ್ಟ ಮಹಿಳೆಯಾಗಿದ್ದಾರೆ. ಯಶೋಧರಮ್ಮ ದಾಸಪ್ಪ ಅವರು ಇಂದಿನ ಹಾಗೂ ಮುಂದಿನ ಪೀಳಿಗೆಯ ಹೆಣ್ಣು ಮಕ್ಕಳಿಗೆ ಇವರ ಜೀವನ ಸಾಧನೆ ಅತ್ಯುತ್ತಮ ನಿದರ್ಶನವಾಗಲಿ ಎಂದು ಆಶಿಸುತ್ತೇನೆ.

ಲೀಲ ವಾಸುದೇವ್

---

"ನನ್ನ ಪತಿಯ ಅಧಿಕಾರಕ್ಕೆ ಚ್ಯುತಿ ಬಾರದಂತೆ ನೀವೆಲ್ಲರೂ ಸಹಕರಿಸಬೇಕು. ಜನ ನಮ್ಮ ಮೂಲಕ ಕೆಲಸ ಮಾಡಿಸಿಕೊಳ್ಳಲು ಬರಬಾರದು. ಅದಕ್ಕೆ ನೀವು ಪ್ರೋತ್ಸಾಹ ಕೊಡಕೂಡದು. ನೀವು ನಿಮ್ಮ ಕಾಲುಗಳ ಮೇಲೆ ನಿಲ್ಲಬೇಕೇ ಹೊರತು ಪರರ ಆಸೆಗೆ ಕೈ ಚಾಚಬಾರದು."

- ಯಶೋಧರಮ್ಮ ದಾಸಪ್ಪ

(ಪತಿ ದಾಸಪ್ಪ ಅವರು ಸಚಿವರಾಗಿದ್ದಾಗ, ಬಂಧು ಬಳಗದವರನ್ನು ಕರೆಯಿಸಿ, ಕೇಳಿಕೊಂಡ ಮಾತಿದು. ಅಧಿಕಾರ ಸ್ವಾರ್ಥಕ್ಕಾಗಿ ಸ್ವಜನ ಪಕ್ಷಪಾತವಾಗಬಾರದೆಂಬ ನುಡಿಗಳಿವು)

# ‘ಕರ್ನಾಟಕದ ಕಸ್ತೂರ ಬಾ’

ಸಿರಿವಂತ ಮನೆತನದ
ಹಿರಿತನದ ಕನ್ಯೆ ಯಶೋಧರ
ನೆಚ್ಚಿನ ಪುತ್ರಿ ರಾಮಯ್ಯ ರೇವಮ್ಮಗೆ
ವಿದ್ಯಾವಂತೆ ಸದ್ಗುಣ ಸಂಪನ್ನೆ

ಕೈಹಿಡಿದ ಪತಿ ವಕೀಲ ದಾಸಪ್ಪ
ವಂಶೋದ್ಧಾರಕರೀರ್ವರು ಪುತ್ರರು
ರಾಮದಾಸ, ತುಳಸೀ ದಾಸರು
ಅಪರಿಮಿತ ಆನಂದದ ಸಂಸಾರ

ಆಹ್ವಾನಕೆ ಮಣಿದು ತಲುಪಿ ವಾರ್ಧಾ
ಕಟ್ಟು ನಿಟ್ಟಿನ ನಿಯಮವೇ ಸದಾ
ಗಾಂಧೀಜಿಯ ಪ್ರಭಾವಕೆ ಸಮ್ಮತಿ
ವಕೀಲ ವೃತ್ತಿಗೆ ಇತ್ತರು ನಿವೃತ್ತಿ

ರೇಷ್ಮೆ ಬಟ್ಟೆಯ ಬದಲಿಗೆ ಖಾದಿ
ನಿರಾಡಂಬರದ ಬದುಕೆ ಹಾದಿ
ಆದರು ಖಾದಿ ವಸ್ತ್ರಧಾರಿಗಳು
ಸ್ವಾತಂತ್ರ್ಯ ಚಳುವಳಿಯ ಸಂಘಟಿಕರು

ಶಿವಪುರ ಧ್ವಜ ಸತ್ಯಾಗ್ರಹದಲಿ
ಹೋರಾಡಿ ಪೋಲೀಸರ ವಿರುದ್ಧದಲಿ
ಬೆದರದೆ ಬಂದೂಕಿಗೆ ಬಂದೋಬಸ್ತಿನಲಿ
ಯಶಸ್ವಿ ಕಂಡ ಬಹದ್ದೂರ್ ಹೆಣ್ಣು

ಸಚಿವ ಸಂಪುಟವನ್ನೇರಿದ ಪ್ರಪ್ರಥಮ ಮಹಿಳೆ
ಸಮಾಜ ಕಲ್ಯಾಣದ ನಿಸ್ವಾರ್ಥ ಸಚಿವೆ
ಕನ್ಯಾಶ್ರಮದ ಸರೋಜಳ ಸ್ವೀಕರಿಸಿ ತುಳಸೀದಾಸಗೆ
ದಲಿತ ಪ್ರಭಾಳ ದತ್ತು ಪಡೆದ ಧೀಮಂತ ರಮಣಿ

ಗಾಂಧೀಜಿಯ ತತ್ವಪಾಲನೆಯ ನಿಷ್ಠಾವಂತೆ
ರದ್ದಾದ ಮಧ್ಯಪಾನ ನಿಷೇಧವ ತಾಳದಂತೆ
ನಡೆಸಿ ಪ್ರತಿಭಟನೆ, ಸತ್ಯಾಗ್ರಹಗಳ
ತೊರೆದು ಮಂತ್ರಿಸ್ಥಾನವನೆ ನೊಂದುಮನದಲಿ

ಪಡೆದು ಸ್ಥಳ ಟ್ರಸ್ಟಿಗೆ ಅರಸೀಕೆರೆಯಲಿ
ಅರಳಿಸಿ ಅನಾಥ ಸ್ತ್ರೀಯರ ಪ್ರತಿಭೆಗಳ
ತ್ಯಜಿಸಿ ಸ್ವಹಿತವ, ದುಡಿದು ಸಾಮರ್ಥ್ಯದಲಿ
ದೀನ ದಲಿತ ಅಂಧ ನಿರ್ಗತಿಕರ ಏಳಿಗೆಯಲಿ

ಆದಿರಿ ಸಮಾಧಿ ಕಸ್ತೂರ ಬಾ ಆಶ್ರಮದಲಿ
ಈಡೇರಿಸಿ ಗಾಂಧೀಜಿಯ ಮನದಾಸೆಗಳ
ಆಯಿತು ಹುಮ್ಮಸ್ಸಿನ ಚೇತನ – ನಿಶ್ಚೇತನ
ಅವಿರತ ನೆಲಸಿ ಜನಮನದ ಗದ್ದುಗೆಯಲಿ

ಲೀಲ ವಾಸುದೇವ್

---

"ನಾವು ಧ್ವಜಾರೋಹಣ ಮಾಡುತ್ತೇವೆ. ನಾವು ಎಲ್ಲದಕ್ಕೂ ಸಿದ್ಧರಿದ್ದೇವೆ. ಅವರು ನಮ್ಮನ್ನು ಬಂಧಿಸಿದರೂ ಚಿಂತೆಯಿಲ್ಲ. ನಾವಂತೂ ಇಟ್ಟ ಹೆಜ್ಜೆ, ತೊಟ್ಟ ಸಂಕಲ್ಪ ಬಿಡುವುದಿಲ್ಲ."

- ಯಶೋಧರಮ್ಮ
(ಶಿವಪುರ ಧ್ವಜಾರೋಹಣ ಸಂದರ್ಭದಲ್ಲಿ)

# ಪರಿವಿಡಿ

---

"ಇದು ಬಡವರ ಮನೆ, ಇಲ್ಲಿ ಚಿನ್ನದ ಬಳೆಗಳ ಬದಲಾಗಿ ಗಾಜಿನ ಬಳೆಗಳೇ ಶೋಭಿಸುತ್ತವೆ. ಮನುಷ್ಯ ಜೀವನದಲ್ಲಿರುವ 'ಸುಖ' ಗಾಜಿನ ಬಳೆಯ ಹಾಗೆಯೇ ಆಕರ್ಷಕವಾಗಿದ್ದು, ನಾಜೂಕಾಗಿರುತ್ತದೆ. ಗಾಜಿನ ಬಳೆಗಳ ಹಾಗೆಯೇ ಬಹಳ ಎಚ್ಚರದಿಂದ ಈ ಸೌಭಾಗ್ಯವನ್ನು ಕಾಪಾಡಬೇಕಾಗುತ್ತದೆ. ಆದ್ದರಿಂದ ಗಾಜಿನ ಬಳೆಗಳೇ ಸೌಭಾಗ್ಯದ ಉತ್ತಮ ರೂಪಕಗಳು."

- ಕಸ್ತೂರ್‌ಬಾ ಗಾಂಧಿ

(ಮೂರನೆ ಮಗ ರಾಮದಾಸ್‌ನ ಮದುವೆ ಸಂದರ್ಭದಲ್ಲಿ ಸೊಸೆಗೆ ಹೇಳಿದ ಮಾತು)

## ಯಶೋಧರಮ್ಮ ದಾಸಪ್ಪ

ಶ್ರೀಮತಿ ಯಶೋಧರಮ್ಮ ದಾಸಪ್ಪ ಅವರು ಒಕ್ಕಲಿಗ ಜನಾಂಗದ ಶ್ರೀರಾಮನೆಂದೇ ಹೆಸರುವಾಸಿಯಾಗಿದ್ದ ಶ್ರೀ ಕೆ. ಎಚ್. ರಾಮಯ್ಯ ಅವರು ಜೇಷ್ಠ ಪುತ್ರಿ ರಾಮಯ್ಯ ಅವರಿಗೆ ಐದು ಜನ ಪುತ್ರಿಯರು ಹಾಗೂ ಆರು ಜನ ಪುತ್ರರು ಇದ್ದರು. ಆದರೆ ಯಶೋಧರಮ್ಮ ಅವರ ಪ್ರೀತಿಯ ಮಗಳು, ತಮ್ಮ ಪುತ್ರಿಯನ್ನು ಪುತ್ರನಂತೆ ಬೆಳೆಸಿ ವಿದ್ಯಾವಂತಳನ್ನಾಗಿ ಮಾಡಿ ಧೈರ್ಯ ತುಂಬಿ ಪ್ರೋತ್ಸಾಹಿಸಿದ್ದರು. ವಿದ್ಯಾವಂತ ಧುರೀಣ ತಂದೆ ತಮ್ಮ ಹಿರಿಯ ಮಗಳಾದ ಯಶೋಧರಮ್ಮನ ಸರ್ವತೋನ್ಮುಖ ಬೆಳವಣಿಗೆಗೆ ಕಾರಣರಾದರು.

### ಕುಟುಂಬದ ಹಿನ್ನೆಲೆ/ ಪೂರ್ವಿಕರು

ಯಶೋಧರಮ್ಮ ಅವರ ಮುತ್ತಜ್ಜನಾದ ಚಿಕ್ಕಣ್ಣಗೌಡರು ದೊಡ್ಡ ಬಳ್ಳಾಪುರದ ಕಲ್ಲು ದೇವರ ಹಳ್ಳಿ ಎಂಬ ಗ್ರಾಮದವರು. ಏಕಶಿಲಾ ಮೂರ್ತಿಯಾದ ಶ್ರೀ ಆಂಜನೇಯ ದೇವರನ್ನು ಪೂಜಿಸುತ್ತಿದ್ದರು. ಆ ನಿಟ್ಟಿನಲ್ಲಿ ಗ್ರಾಮಕ್ಕೆ ಕಲ್ಲುದೇವರ ಹಳ್ಳಿ ಎಂದು ನಾಮಾಂಕಿತವಾಯಿತು. ದೇವರ ಹೆಸರಿನಲ್ಲಿ ವರ್ಷಕ್ಕೊಮ್ಮೆ ಊರಿನವರಿಗೆಲ್ಲಾ ಊಟ ಹಾಕುವ ಪದ್ಧತಿಯಿತ್ತು. ದಾನ ಧರ್ಮಗಳಿಗೆ ಹೆಸರು ವಾಸಿಯಾಗಿದ್ದ ಮನೆತನದವರು ಮುಂದೆ ನೀರಿನ ಅಭಾವಕ್ಕೀಡಾಗಿ, ಬರಗಾಲ ಬಂದಾಗ ಮನೆ ಮಂದಿಗೆಲ್ಲಾ ದುರ್ದಿನಗಳು ಬಂದವು. ಆಗ ಚಿಕ್ಕಣ್ಣಗೌಡರು ತಮ್ಮ ಸ್ವಾಭಿಮಾನವನ್ನು ಬಿಟ್ಟು ಬೆಂಗಳೂರಿಗೆ ಬಂದು, ಕೂಲಿಯ ಕೆಲಸ ಮಾಡಿ ಹಣ ಸಂಪಾದಿಸ ತೊಡಗಿದರು. ನಂತರ ಅವರ ಏಕೈಕ ಪುತ್ರಹನುಮಯ್ಯನು ಕೆಟ್ಟು ಪಟ್ಟಣ ಸೇರು ಎಂಬಂತೆ ಇಬ್ಬರೂ ಬೆಂಗಳೂರಿಗೆ ಬಂದು ಪಟ್ಟಣದಲ್ಲಿ ದುಡಿಯ ಹತ್ತಿದರು. ಹನುಮಯ್ಯನಿಗೆ ವಿದ್ಯಾವಂತನಾಗಬೇಕೆಂಬ ಹಂಬಲವೂ ಇದ್ದಿತು. ಆದರೆ ಪರಿಸ್ಥಿತಿ ಅನುಕೂಲವಾಗಿರಲಿಲ್ಲ. ನಂತರ

ಹಳ್ಳಿಯ ಹೆಣ್ಣೆ ಆದರೂ ಗುಣವಂತೆ, ಧೈರ್ಯವಂತೆ ಹಾಗೂ ಬುದ್ದಿವಂತೆಯಾದ ನಂಜಮ್ಮನೊಂದಿಗೆ ಮದುವೆಯಾಯಿತು. ಆಕೆ ಇಬ್ಬರು ಗಂಡುಮಕ್ಕಳಿಗೆ ಜನ್ಮವಿತ್ತಳು. ರಾಮ ಮತ್ತು ಲಕ್ಷ್ಮಣ. ಲಕ್ಷ್ಮಣನಿಗೆ ಓದುವ ಆಸೆ ಎಳ್ಳಷ್ಟು ಇರಲಿಲ್ಲ. ಅದರೆ ರಾಮಯ್ಯನಿಗೆ ಓದುವ ಒಲವು ಬಹಳವಾಗಿ ಇತ್ತು.

ಕೆ.ಎಚ್. ರಾಮಯ್ಯ ಅವರ ವಿದ್ಯಾರ್ಜನೆ

ತಾನು ವಿದ್ಯಾವಂತನಾಗಬೇಕೆಂದು ಹಂಬಲಿಸಿದ ಹನುಮಯ್ಯನಿಗೆ ತನ್ನ ದೊಡ್ಡ ಮಗನನ್ನು ದೊಡ್ಡ ವಿದ್ಯಾವಂತನಾಗಿ ಮಾಡುಲೇ ಬೇಕೆಂಬ ಬಯಕೆ. ಮಗನನ್ನು ಶಾಲೆಗೆ ಹಾಕಿದನು. ರಾಮಯ್ಯ ಆಸಕ್ತಿಯುಳ್ಳ ವಿದ್ಯಾರ್ಥಿ, ಆದುದರಿಂದ ಚೆನ್ನಾಗಿ ಕಲಿಯುತ್ತಿದ್ದನು. ಎಸ್.ಎಸ್.ಎಲ್.ಸಿ. ತೇರ್ಗಡೆಯಾಗುವಷ್ಟರಲ್ಲಿ ತಂದೆ ತೀರಿ ಕೊಂಡರು. ಅನಕ್ಷರಸ್ಥೆಯಾದ ನಂಜಮ್ಮ ಗಂಡನ ಬಯಕೆ ಈಡೇರಿಸುವ ಸಲುವಾಗಿ ಮಗನನ್ನು ಮದ್ರಾಸಿಗೆ ಕರೆದುಕೊಂಡುಹೋದರು. ರಾಮಯ್ಯ ಅಲ್ಲಿ ಬಿ.ಎ. ಪದವಿಯನ್ನು ಪಡೆದು, ನಂತರ ಬಿ.ಎಲ್ ಪದವಿ ವ್ಯಾಸಂಗ ಪಡೆದನು.

ಮದ್ರಾಸಿನಲ್ಲಿ (ಈಗಿನ ಚನ್ನೈ) ವ್ಯಾಸಂಗ ಮಾಡುತ್ತಿರುವಾಗ ಸ್ವಾಮಿ ವಿವೇಕಾನಂದರ ಉಪನ್ಯಾಸವನ್ನು ಕೇಳಿಸಿಕೊಂಡರು. ನಂತರ ಪ್ರಶ್ನೋತ್ತರಗಳಿಗೆ ಅವಕಾಶವಿತ್ತು. ಆಗ ರಾಮಯ್ಯ ಪ್ರಶ್ನೆಗಳ ಮಳೆಗೆರೆದನು. ಆಮೇಲೆ ವಿವೇಕಾನಂದರು ತಮ್ಮನ್ನು ಭೇಟಿಯಾಗುವಂತೆ ಹೇಳಿ ಕಳುಹಿಸಿದರು. ಮೊದಲು ಅರೆ ಕ್ಷಣ ಹೆದರಿದ ರಾಮಯ್ಯ ನಂತರ ಧೈರ್ಯವಾಗಿ ಭೇಟಿ ಮಾಡಿದರು. ವಿವೇಕಾನಂದರು ಎತ್ತರದ ವ್ಯಕ್ತಿ ರಾಮಯ್ಯ ಅವರನ್ನು ಒಮ್ಮೆ ದೃಷ್ಟಿಸಿ ನೋಡಿ ಆನಂದದಿಂದ ಅಪ್ಪಿಕೊಂಡು ಆಶೀರ್ವದಿಸಿದರು. ಈ ವರ್ತನೆ ರಾಮಯ್ಯ ಅವರ ಮೇಲೆ ಅತೀವ ಪ್ರಭಾವ ಬೀರಿತು. ಅಂದಿನಿಂದ ರಾಮಯ್ಯ ಸ್ವಾಮಿ ವಿವೇಕಾನಂದರ ಅನುಯಾಯಿಯಾಗಿ ರಾಮಕೃಷ್ಣ ಆಶ್ರಮದ ಸೇವಾಕಾರ್ಯಕ್ಕೆ ನೆರವಾದರು.

ರಾಮಯ್ಯ ಅವರಿಗೆ ತಹಸೀಲ್ದಾರರ ಮಗಳು ಶ್ರೀಮತಿ ರೇವಮ್ಮನೊಡನೆ ವಿವಾಹವಾಯಿತು. ರಾಮಯ್ಯ ಅವರ ಕಾರ್ಯತತ್ಪರತೆ ಹಾಗೂ ದಕ್ಷತೆಯನ್ನು ಕಂಡ ಮೈಸೂರು ಮಹಾರಾಜರು ಆಕರ್ಷಿತರಾದರು. ತಾವು ರೂಪಿಸಿದ್ದ ಹಿಂದುಳಿದ ಜನಾಂಗದ ಪ್ರಗತಿಗೆ, ಶ್ರಮಿಸಲು ಈತನೇ ಸಮರ್ಥನಾದವನೆಂದು ಪರಿಗಣಿಸಿ ಅವರನ್ನು ಹಿಂದುಳಿದ ಸಮಾಜದ ಸಂಸ್ಥೆಗೆ ವಿಶೇಷಾಧಿಕಾರಿಯನ್ನಾಗಿ ನೇಮಿಸಿದರು. ಮುಂದೆ ಕರ್ನಾಟಕ ಸಹಕಾರ ಸಂಘಗಳ ರಿಜಿಸ್ಟ್ರಾರ್ ಆದರು. ಸಹಕಾರಿ ಸಂಘಗಳ ಏಳಿಗೆಗೆ ದುಡಿದು "ಸಹಕಾರ ಸಂಘಗಳ ಪಿತಾಮಹ"ನೆಂಬ ಬಿರುದು ಪಡೆದರು. **(Father of Co-op Societies)**

ರಾಮಯ್ಯ ಅವರ ಸಮಾಜ ಸೇವೆಯನ್ನು ಮೆಚ್ಚಿದ ಮೈಸೂರಿನ ಮಹಾರಾಜರು 'ಬಾರಿಸ್ಟರ್ ಆಟ್ ಲಾ' ಪದವಿಯನ್ನು ಪಡೆಯಲು ಸರ್ಕಾರದ ವತಿಯಿಂದ ಇಂಗ್ಲೆಂಡ್‌ಗೆ ಕಳುಹಿಸಿದರು. ಅಲ್ಲಿ ಓದುತ್ತಿರುವಾಗ ಒಮ್ಮೆ ಗಾಂಧೀಜಿಯವರು ಇಂಗ್ಲೆಂಡಿಗೆ ಬಂದು, ತಂಗಲು ಅವಕಾಶವಿಲ್ಲದೆ ಇರುವುದನ್ನು ಕಂಡು ರಾಮಯ್ಯ ಅವರು ತಮ್ಮ ಕೊಠಡಿಯಲ್ಲಿ ತನ್ನ ಮಂಚವನ್ನು ಬಿಟ್ಟುಕೊಟ್ಟು ತಾನು ನೆಲದ ಮೇಲೆ ಹಾಸಿಕೊಂಡು ಮಲಗಿದರಂತೆ. 'ಲಾ' ಮುಗಿಸಿ ಹಿಂದಿರುಗಿದ ಮೇಲೆ ಯುವರಾಜರೊಡನೆ ಪ್ಯಾರೀಸ್‌ಗೆ ಹೋಗಿ ಕೈಗಾರಿಕೆಗಳ ಅಭಿವೃದ್ಧಿಯ ಬಗ್ಗೆ ಅಧ್ಯಯನ ಮಾಡಿಕೊಂಡು ಬಂದರು. ಒಮ್ಮೆ ಪುರಭವನದಲ್ಲಿ ಈ ವಿಚಾರ ಮಾತನಾಡುತ್ತ ಭಾವಪರವಶರಾಗಿ ಹೃದಯಾಘಾತವಾಯಿತು. ನಂತರ ಕೊಂಚ ಸುಧಾರಿಸಿಕೊಂಡವರು ಮಾರನೆಯ ದಿನ ವಿಶ್ರಾಂತಿ ಪಡೆಯದೆ ಮಹಾರಾಜರ ಹಾಗೂ ಯುವರಾಜರ ಜೊತೆ ಮಾತಾನಾಡುವ ಅವಶ್ಯಕತೆ ಇದ್ದುದರಿಂದ, ಅರಮನೆಗೆ ಬಂದು ಅವರನ್ನು ಭೇಟಿ ಮಾಡಿ, ಮಾತನಾಡಿ ತೆರಳಿದ ವ್ಯಕ್ತಿ ಮರುದಿನ ಸ್ವರ್ಗಸ್ಥರಾದರು. ಅವರ ಅಕಾಲ ಮೃತ್ಯುವಿಗೆ ಕಂಬನಿ

ಮಿಡಿಯದೇ ಇದ್ದವರೇ ಇಲ್ಲ. ಹಿಂದುಳಿದ ಜನಾಂಗ ಹಾಗೂ ದೀನ ದಲಿತರು ತಮ್ಮ ಆಶ್ರಯದಾತನನ್ನು ಕಳೆದುಕೊಂಡು ತುಂಬಲಾರದ ನಷ್ಟವನ್ನು ಅನುಭವಿಸಿದರು. ಆಗ ಅವರಿಗೆ ಕೇವಲ 52 ವರ್ಷಗಳು.

## ಶ್ರೀಮತಿ ಯಶೋಧರಮ್ಮ ಅವರ ತಮ್ಮಂದಿರು ಹಾಗೂ ತಂಗಿಯರು

ಶ್ರೀಮತಿ ಯಶೋಃಧರಮ್ಮ ಅವರು ಜನಾನುರಾಗಿ ಕೆ. ಎಚ್. ರಾಮಯ್ಯ ಹಾಗೂ ರೇವಮ್ಮ ಅವರ ಪ್ರತಿಷ್ಠಿತ ಹಿರಿಯ ಪುತ್ರಿ ಇವರು 1905 ಮೇ ತಿಂಗಳಿನಲ್ಲಿ ಜನಿಸಿದರು. ಇವರಿಗೆ ನಾಲ್ಕು ಜನ ತಂಗಿಯರು ಹಾಗೂ ಆರು ಜನ ತಮ್ಮಂದಿರು. ವಿದ್ಯಾವಂತ ಹಾಗೂ ಸಕಲ ಸಂಪತ್ತನ್ನು ಹೊಂದಿದ್ದ ಕುಟುಂಬ. ಯಶೋಧರಮ್ಮ ಅವರ ಮೊದಲನೆಯ ತಮ್ಮ ಕೆ.ಆರ್. ಮರುದೇವೆಗೌಡರು I.A.S., ಎರಡನೆಯವರು ಕಾಶಿ ವಿಶ್ವನಾಥಗೌಡ ಊಟಿ ಅರಮನೆಯ ಮೇಲುಸ್ತುವಾರಿ ಮಾಡುತ್ತಿದ್ದರು, ಕೌಸಲ್ಯದೇವಿ ಸಮಾಜ ಸೇವಕಿ, ಮೈತ್ರೇಯಿ ಗೃಹಿಣಿ, ಕೆ.ಆರ್. ಆದಿನಾರಾಯಣ ಗೌಡ- ಸೇನಾಪಡೆಯಲ್ಲಿ ಮೇಜರ್ ಆಗಿದ್ದವರು ನಿವೃತ್ತಿಯ ನಂತರ ಕೋಲಾರದ ಗೋಲ್ಡ್ ಮೈನ್ಸ್ (KGF)ನಲ್ಲಿ ವಾಚ್ ಆಂಡ್ ವಾರ್ಡ್ ಅಗಿದ್ದರು. (ಎರಡನೆಯ ಮಹಾಯುದ್ದದಲ್ಲಿ ಬಂದಿಸಲ್ಪಟ್ಟು ಜರ್ಮನಿಯ ಸೆರೆಮನೆಯಲ್ಲಿ ಇದ್ದು, ಯುದ್ದ ಮುಗಿದ ಎಷ್ಟೋ ಸಮಯದ ನಂತರ ಬಿಡುಗಡೆಗೊಳಿಸಲಾಗಿತ್ತು) ಕ್ಯಾಪ್ಟನ್ ಕೆ.ಆರ್. ಕೃಷ್ಣ ಮೈಸೂರು ಮಹಾರಾಜರ ಅಂಗರಕ್ಷಕರಾಗಿದ್ದರು. ಸ್ವಾತಂತ್ರ್ಯ ಹೋರಾಟಗಾರರಾದ ಸಾಹುಕಾರ ಚೆನ್ನಯ್ಯ ಅವರ ಏಕೈಕ ಪುತ್ರಿಯ ಪತಿ. ಕೆ.ಆರ್. ಗೋವಿಂದ ಕಂಟ್ರಾಕ್ಟರ್, ಕೆ.ಆರ್. ಸೂರ್ಯ ನಾರಾಯಣ ಗೌಡ (ರಾಜು) ಎಚ್.ಎಂ.ಟಿ ಫ್ಯಾಕ್ಟರಿಯಲ್ಲಿ ಜನರಲ್ ಮ್ಯಾನೇಜರ್ ಆಗಿದ್ದರು ನಂತರ ವಸಂತ ಲಕ್ಷ್ಮಿ ಹಾಗೂ ಜಯಲಕ್ಷ್ಮಿ ಅವರು ಗೃಹಿಣಿಯರಾಗಿದ್ದರು.

## ಯಶೋಧರಮ್ಮ ಅವರ ವಿದ್ಯಾಭ್ಯಾಸ

ಕೆ. ಎಚ್. ರಾಮಯ್ಯ ಅವರು ತಮ್ಮ ಹಿರಿಯ ಮಗಳಾದ ಯಶೋಧರ ತಮ್ಮಂತೆ ಎಲ್ಲವನ್ನೂ ತ್ಯಾಗಮಾಡಿ ಜನಸೇವೆ ಮಾಡಬೇಕೆಂಬ ಕನಸು ಕಂಡವರು. ಆದ್ದರಿಂದ ಬುದ್ಧನ ಪತ್ನಿಯ ನೆನಪಿಗಾಗಿ 'ಯಶೋಧರ' ಎಂದು ಹೆಸರನ್ನು ಮಗಳಿಗೆ ನಾಮಕರಣ ಮಾಡಿದ್ದರು. ಮಗಳು ಬೆಳೆದಂತೆ ಅವಳ ವಿದ್ಯಾಭ್ಯಾಸದ ಕಡೆಗೆ ಗಮನ ಹರಿಯಿತು. ಹಿಂದುಳಿದ ಜನಾಂಗದಲ್ಲಿ ಗಂಡು ಮಕ್ಕಳನ್ನೇ ವಿದ್ಯೆ ಕಲಿಯಲು ಕಳುಹಿಸದ ಕಾಲದಲ್ಲಿ ತಂದೆ ತಾಯಿಗಳು ಹೆಣ್ಣುಮಕ್ಕಳನ್ನು ಶಾಲೆಗೆ ಕಳುಹಿಸುವುದು ಅಷ್ಟು ಸುಲಭದ ಕೆಲಸವಾಗಿರಲಿಲ್ಲ. ಅಂತಹ ಹೆಚ್ಚು ತಿಳುವಳಿಕೆ ಇಲ್ಲದ ಕಾಲದಲ್ಲಿ ಸಮಾಜ ಸುಧಾರಕರಾದ ಶ್ರೀ ರಾಮಯ್ಯ ಅವರು ಸುಮ್ಮನಿರುವ ವ್ಯಕ್ತಿಯಲ್ಲ. ಯಶೋಧರಳನ್ನು ವಿದ್ಯಾಭ್ಯಾಸಕ್ಕಾಗಿ ಚಾಮರಾಜಪೇಟೆಯಲ್ಲಿನ ಪ್ರಾಥಮಿಕ ಶಾಲೆಗೆ ದಾಖಲು ಮಾಡಿದರು. ಅನಂತರ ಲಂಡನ್ ಮಿಷನ್ ಪ್ರೌಢಶಾಲೆಗೆ ಸೇರಿಸಿದರು. ಸಾಂಪ್ರದಾಯಿಕ ಕುಟುಂಬದವರಾದ ತಾಯಿ ಶ್ರೀಮತಿ ರೇವಮ್ಮನವರಿಗೆ ಇದು ಸ್ವಲ್ಪ ಕೂಡ ಸಮಾಧಾನವಿರಲಿಲ್ಲ. ಮಗಳಿಗೆ ಸ್ವಲ್ಪ ವಿದ್ಯೆ ಇರಬೇಕು. ಆದರೆ, ಮನೆ ಕೆಲಸವನ್ನು ಮತ್ತು ಕೈಕೆಲಸಗಳನ್ನು ಕಲಿತು ಮಗಳು ಒಳ್ಳೆಯ ಗೃಹಿಣಿಯಾಗಬೇಕೆಂಬುದು ತಾಯಿಯ ಅಭಿಪ್ರಾಯ, ಆಸೆ. ಮನೆಯಲ್ಲಿ ಅತಿಥಿ ಅಭ್ಯಾಗತರ ಸಂಖ್ಯೆ ಹೆಚ್ಚುತ್ತಾ ಹೋಯಿತು.

ಇದರಿಂದ ಮಗಳ ವಿದ್ಯಾಭ್ಯಾಸಕ್ಕೆ ಅಡಚಣೆಯಾಗುತ್ತಿದೆ ಎಂದು ತಿಳಿದ ರಾಮಯ್ಯ ಅವರು ಆಕೆಯನ್ನು ಹಾಸ್ಟಲಿಗೆ ಸೇರಿಸಿದರು. ಪ್ರೌಢಶಾಲೆಯಲ್ಲಿ ಹತ್ತನೇ ತರಗತಿಯಲ್ಲಿ (ಎಸ್.ಎಸ್.ಎಲ್.ಸಿ.) ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದ ಯಶೋಧರಳನ್ನು ಮದರಾಸಿನ ಕ್ವೀನ್ ಮೇರೀಸ್ ಕಾಲೇಜಿನಲ್ಲಿ ಇಂಟರ್ ಮೀಡಿಯಟ್ ಓದಲು ಅನುವು ಮಾಡಿಕೊಟ್ಟರು. ರಾಮಯ್ಯ ಅವರ ನಿರ್ಧಾರದ

ಮುಂದೆ ತಾಯಿ ರೇವಮ್ಮ ಅವರ ಮಾತು ನಡೆಯುವಂತಿರಲಿಲ್ಲ. ಆದರೆ ಅಲ್ಲಿನ ಹವಾಮಾನ ಒಗ್ಗದೆ ಹೋದುದರಿಂದ ವಿದ್ಯಾಭ್ಯಾಸ ಇಂಟರ್‌ಮೀಡಿಯೇಟ್‌ನಿಂದ ಮುಂದುವರಿಸಲು ಸಾಧ್ಯವಾಗಲಿಲ್ಲ.

ಯಶೋಧರಮ್ಮ ಅವರು ಹಾಸ್ಟಲಿನಿಂದ ರಜಾ ದಿನಗಳಿಗೆ ಮನೆಗೆ ಬಂದಾಗ ತಮ್ಮಂದಿರು, ತಂಗಿಯರು ಅವರನ್ನು ಸುತ್ತಿಕೊಳ್ಳುತ್ತಿದ್ದರು. ತಮ್ಮ ಅನುಭವಗಳನ್ನು ಅವರೊಡನೆ ಹಂಚಿಕೊಳ್ಳುತ್ತಿದ್ದರು. ಅವರಿಗೆ ಸಂದ ಬಹುಮಾನಗಳನ್ನು ಕಂಡು ತಮ್ಮಂದಿರು ತಂಗಿಯರು ಬಹು ಸಂತೋಷ ಪಡುತ್ತಿದ್ದರು. ಯಶೋಧರಮ್ಮ ತಮ್ಮ ಮೃದು ಧ್ವನಿಯಲ್ಲಿ ಹಾಡಿದರೆ, ತಂಗಿ ಮೈತ್ರೇಯಿ ಹಾರ್ಮೋನಿಯಂ ನುಡಿಸುವರು. ಅವರ ಸೋದರತ್ತೆಯ ಮಗಳು ಅನುಸೂಯ ವೀಣೆ ನುಡಿಸಿದರೆ ಈಕೆ ತಬಲ ನುಡಿಸುತ್ತಿದ್ದರು. ಹೀಗೆ ಇಡೀ ಕುಟುಂಬ ಶಾರದ ದೇವಿಯ ಕೃಪಾ ಕಟಾಕ್ಷಕ್ಕೆ ಪಾತ್ರರಾಗಿದ್ದರು.

## ಯಶೋಧರಮ್ಮ ಅವರ ವಿವಾಹ

ಕೆ.ಎಚ್. ರಾಮಯ್ಯ ಅವರು ಹಿಂದುಳಿದ ಜನಾಂಗದವರ ಶ್ರೇಯಸ್ಸಿಗಾಗಿ ದುಡಿಯುತ್ತಿದ್ದಂತೆ ಕೊಡಗಿನ ನ್ಯಾಯಾಧೀಶರಾಗಿದ್ದ 'ರಾವ್ ಸಾಹೇಬ ಚನ್ನಯ್ಯ ಅವರು ಸಹ ಹಿಂದುಳಿದ ವರ್ಗಕ್ಕೆ ವಿದ್ಯೆ, ನೌಕರಿ, ಸಮಾನತೆಗಳಿಗಾಗಿ ಹೋರಾಡುತ್ತಿದ್ದರು. ಬ್ರಿಟೀಷ್ ಸರ್ಕಾರವು ಚನ್ನಯ್ಯನವರಿಗೆ 'ರಾವ್ ಬಹದ್ದೂರ್' ಎಂಬ ಬಿರುದನ್ನು ನೀಡಿ ಗೌರವಿಸಿತ್ತು. ಇಂತಹ ನಿಷ್ಠಾವಂತ ಶ್ರಮಜೀವಿ, ಪ್ರಗತಿ ಪರ ಹೋರಾಟಗಾರ, ಬಡವರ ಬಂಧು, ಇವರ ಸೇವೆಗೆ ಒಲಿದ ಮಹಾರಾಜರು ಚನ್ನಯ್ಯ ಅವರಿಗೆ 'ಲೋಕ ಸೇವಾನಿರತ' ಎಂಬ ಬಿರುದನ್ನು ನೀಡಿದ್ದರು. ಇವರ ವಿದ್ಯಾಭ್ಯಾಸವೇ ಒಂದು ಸಾಹಸ. ತಂದೆಯವರು ಕೊಡಗಿನ ಪ್ರಸಿದ್ಧ ಬೇಲೂರೇಗೌಡರು ಕಾಲವಾದಾಗ ಚನ್ನಯ್ಯ ಅವರು ಕೇವಲ ಹತ್ತನೆಯ ತರಗತಿಯಲ್ಲಿ ಓದುತ್ತಿದ್ದರು. ಸಂಸಾರದ ಹೊಣೆಯನ್ನು ಹೊತ್ತು ಕೊಂಡು ಉಪಾಧ್ಯಾಯ ವೃತ್ತಿಯನ್ನೂ ಕೈಗೊಂಡರು. ವಿವಿಧ ಹಂತದ ವ್ಯಾಸಂಗವನ್ನು

ಮುಂದುವರೆಸುತ್ತಾ ಪರೀಕ್ಷೆಗಳನ್ನು ಪಾಸುಮಾಡುತ್ತಾ, ಮೇಲೇರುತ್ತಾ ನ್ಯಾಯಾಧೀಶರಾಗಿ ಮನ್ನಣೆ ಪಡೆದರು.

॥ ಶುಭಮಸ್ತು ॥



ಆದಿತ್ಯಾದಿ ಗ್ರಹಾಸ್ಸರ್ವೇ ಸನಕ್ಷತ್ರಾಸ್ಸರಾಶಯಃ ।
ಕುರ್ವಂತು ಮಂಗಳಂ ನಿತ್ಯಂ ಯಸ್ಯೈಷಾ ಲಗ್ನಪತ್ರಿಕಾ ॥

ಶ್ರೀಮತ್ ಯುವರಾಜಾ ಸಾಹೇಬ್ ಬಹದ್ದೂರವರ
ಸನ್ನಿಧಾನದಲ್ಲಿ

ರಿಟೈರ್ಡ್ ಸಬ್.ಜಡ್ಜ್ ರಾವ್‌ಸಾಹೇಬ ಎಚ್. ಚನ್ನಯ್ಯನು ಭಕ್ತಿಪುರಸ್ಸರವಾಗಿ
ಅತ್ಯಂತ ವಿನಯದೊಡನೆ ಬರೆಯುವ ವಿಜ್ಞಾಪನೆಗಳು.

ಮಹಾಸ್ವಾಮಿ :

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷಂಗಳು ೧೮೪೮ ನೇ ಶುಭ ಕ್ರೋಧನನಾಮ ಸಂವತ್ಸರದ ಫಾಲ್ಗುಣ ಬಹುಳ ಪಂಚಮಿ ಗುರುವಾರ ಘಟಿಕಾ [illegible], ಸ್ವಾತಿ [illegible], ಧೃ. [illegible], ಕ. [illegible], ಸೂ. ಭಾ. [illegible], ಬುಧಃ ಕುಂಭಮಾಸ ತೇದಿ [illegible] ಏವಂ ಪಂಚಾಂಗ ಶುದ್ಧಿಃ ಈ ಶುಭದಿವಸ (೧೯೨೭ನೇ ಮಾರ್ಚಿ [illegible]ನೇ ತಾರೀಖು) ಸೂರ್ಯೋದಯಾನಂತರ ೩ ಘಳಿಗೆ ಮೇಲೆ ೫ ಘಳಿಗೆ ಒಳಗೆ ಸಲ್ಲುವ ಶುಭ ಮೀನಲಗ್ನ ಪುಷ್ಕರಾಂಶದಲ್ಲಿ.

ನನ್ನ ತೃತೀಯ ಕುಮಾರ ಅಡ್ವೊಕೇಟ್
ಚಿ॥ ರಾ॥ ಎಚ್. ಸಿ. ದಾಸಪ್ಪಗೆ

ಕೋ-ಆಪರೇಟಿವ್ ಸೊಸೈಟಿಗಳ ರಿಜಿಸ್ಟ್ರಾರ್ ಮ॥ ರಾ॥ ಕೆ. ಎಚ್. ರಾಮಯ್ಯನವರ ಜ್ಯೇಷ್ಠ ಪುತ್ರಿ
ಚಿ॥ ಸೌ॥ ಹ॥ ಕುಂ॥ ಕೋ॥ ಯಶೋಧರಮ್ಮನನ್ನು

ತಂದು, ಬೆಂಗಳೂರು ಸಿಟಿ ವಿಶ್ವೇಶ್ವರಪುರಂ ಎಕ್ಸ್‌ಟೆನ್ಷನ್ನಲ್ಲಿರುವ "ಮೈತ್ರೇಯಿವಿಲಾಸ" ವೆಂಬ ಮ॥ ರಾ॥ ರಾಮಯ್ಯನವರ ಸ್ವಗೃಹದಲ್ಲಿ ವಿವಾಹವನ್ನು ಬೆಳೆಸಲು ಶ್ರೀಹರಿ ಪ್ರೇರಣಾನುಸಾರ ನಿಶ್ಚೈಸಿರುವ ವಿವರವನ್ನು ಮಹಾ ಸನ್ನಿಧಾನದಲ್ಲಿ ಭಕ್ತಿಪುರಸ್ಸರವಾಗಿ ಅತ್ಯಂತ ವಿನಯದೊಡನೆ ಅರಿಕೆ ಮಾಡಿಕೊಂಡು ಇರುತ್ತೇನೆ—ಮಹಾಸ್ವಾಮಿ.

ಶ್ರೀಮತಿ ಯಶೋಧರಮ್ಮ ಮತ್ತು ಹೆಚ್.ಸಿ. ದಾಸಪ್ಪ ಅವರ
ವಿವಾಹದ ಲಗ್ನ ಪತ್ರಿಕೆ



ಶ್ರೀಮತಿ ಯಶೋಧರಮ್ಮ ಮತ್ತು ಹೆಚ್.ಸಿ. ದಾಸಪ್ಪ ದಂಪತಿಗಳು

ಕೆ.ಎಚ್. ರಾಮಯ್ಯ ಅವರು 'ಬಾರಿಸ್ಟರ್ ಆಟ್ ಲಾ' ಪದವೀಧರರಾದರೆ, ಚೆನ್ನಯ್ಯ ಅವರು ನ್ಯಾಯಾಧೀಶರಾಗಿದ್ದರು. ಇಬ್ಬರ ಆಸೆ ಆಕಾಂಕ್ಷೆಗಳು, ನೀತಿ ನಿಯಮಗಳು ಒಂದೇ ಆಗಿದ್ದವು. ಇಬ್ಬರ ಮನದಾಳದಲ್ಲೂ ಹಿಂದುಳಿದವರ ಏಳಿಗೆಗೆ ಶ್ರಮಿಸುವ ಧ್ಯೇಯವಿತ್ತು. ಇಬ್ಬರೂ ಆಪ್ತಮಿತ್ರರು. ಹೀಗಾಗಿ ಆಪ್ತ ಮಿತ್ರರು ಆಪ್ತ ಬಂಧುಗಳಾದರು. ಕೆ. ಎಚ್. ರಾಮಯ್ಯ ಅವರು ತಮ್ಮ ಜೇಷ್ಠ ಪುತ್ರಿ ಯಶೋಧರ ಅವರನ್ನು ಚನ್ನಯ್ಯ ಅವರ ಮೂರನೆಯ ಮಗ ವಕೀಲರಾಗಿದ್ದ ಎಚ್. ಸಿ. ದಾಸಪ್ಪ ಅವರಿಗೆ ಕೊಟ್ಟು ಲಗ್ನ ಮಾಡಿದರು. ಇದರಿಂದ ಎರಡು ಮನೆತನದ ಬಂಧನ ಮತ್ತಷ್ಟು ಗಾಢವಾಯಿತು. ಏಕೋಭಿರುಚಿಯುಳ್ಳ ಕುಟುಂಬಗಳು ರಾಜಕೀಯ ರಂಗಕ್ಕೆ ಧುಮುಕಲು ನಾಂದಿಯಾಯಿತು.



ಹೆಚ್.ಸಿ. ದಾಸಪ್ಪ ಮತ್ತು ಯಶೋಧರಮ್ಮ ದಾಸಪ್ಪ ಅವರ ಮಕ್ಕಳಾದ ರಾಮದಾಸ್ ಮತ್ತು ತುಳಸಿದಾಸ್ ಅವರೊಂದಿಗೆ

## ಗಾಂಧೀಜಿ ಅವರ ಪ್ರಭಾವ

ಎಚ್. ಸಿ ದಾಸಪ್ಪ ಅವರು ಮದರಾಸಿನ ಕ್ರಿಶ್ಚಿಯನ್ ಕಾಲೇಜಿನಲ್ಲಿ ಬಿ.ಎ. ಪದವಿಯ ನಂತರ ಬೊಂಬಾಯಿಯಲ್ಲಿ ಎಲ್.ಎಲ್. ಬಿ ಪದವಿಯನ್ನು ಪಡೆದರು. ಮೈಸೂರಿಗೆ ಬಂದು ವಕೀಲ ವೃತ್ತಿಯನ್ನು ಆರಂಭಿಸಿ ಅಲ್ಪ ಅವಧಿಯಲ್ಲೇ ಹೆಸರಾಂತ ವಕೀಲರಾದರು. ಹೀಗಿದ್ದೂ ಗಾಂಧೀಜಿ ಅವರ ಆಹ್ವಾನಕ್ಕೆ ಮಣಿದು ಯಶೋಧರಮ್ಮ ಮತ್ತು ದಾಸಪ್ಪ ಅವರು ತಮ್ಮ ಎರಡು ಗಂಡು ಮಕ್ಕಳು ರಾಮದಾಸ್ ಮತ್ತು ತುಳಸೀದಾಸ್ ಸಮೇತ ವಾರ್ಧಾ ಸೇವಾ ಗ್ರಾಮಕ್ಕೆ ತೆರಳಿದರು. ಆರು ತಿಂಗಳೂ ಅಲ್ಲಿಯೇ ತಂಗಿದ್ದರು. ಆಶ್ರಮದ ಕಟ್ಟುನಿಟ್ಟಿನ ನಿಯಮಗಳಿಗೆ ಹೊಂದಿಕೊಂಡು ನಡೆದರು. ಕುಟುಂಬ ಸಮೇತ ಬಂದ ದಾಸಪ್ಪ ಅವರನ್ನು ಮತ್ತು ಯಶೋದರ ಅವರನ್ನು ನೋಡಿ ಗಾಂಧೀಜಿ ಅವರಿಗೆ ಅನಂತ ಆನಂದ ಉಂಟಾಯಿತು.

ಮಹಾತ್ಮ ಗಾಂಧೀಜಿ ಅವರ ಪ್ರಭಾವಕ್ಕೆ ಮಾರು ಹೋದ ದಾಸಪ್ಪ ದಂಪತಿಗಳು ವಾರ್ಧಾದ ಸೇವಾಗ್ರಾಮದಲ್ಲಿ ಸಂಪೂರ್ಣವಾಗಿ ತಮ್ಮನ್ನು ತೊಡಗಿಸಿಕೊಂಡು ಸೇವಾ ನಿರತರಾಗಿದ್ದರು. ಹಿಂತಿರುಗಿದ ಮೇಲೆ ಅವರ ಜೀವನ ಶೈಲಿಯು ಸಂಪೂರ್ಣವಾಗಿ ಬದಲಾಯಿತು. ಗಾಂಧೀಜಿ ಅವರ ಪ್ರಭಾವದಿಂದ ದಾಸಪ್ಪ ಅವರು ತಮ್ಮ ವೃತ್ತಿಗೆ ವಿದಾಯ ಹೇಳಿ ದೇಶಸೇವೆಗೆ ಸಜ್ಜಾದರು. ತಮ್ಮ ಎಲ್ಲ ರೇಷ್ಮೆ ವಸ್ತ್ರ, ಒಡವೆಗಳನ್ನು ತ್ಯಜಿಸಿ, ದಂಪತಿಗಳಿಬ್ಬರೂ ಖಾದಿ ವಸ್ತ್ರಧಾರಿಗಳಾದರು. ಸ್ವತಃ ಚರಕದಿಂದ ನೂಲನ್ನು ತೆಗೆಯಲು ಪ್ರಾರಂಭ ಮಾಡಿದರು. ಮೈಸೂರಿನ ಯಶೋಧರಮ್ಮ ಅವರ ಮನೆ 'ಯಶೋವಿಲಾಸ' ಗ್ರಾಮೀಣ ಭಾಗದಿಂದ ಬರುತ್ತಿದ್ದ ಬಡ ವಿದ್ಯಾರ್ಥಿನಿಯರಿಗೆ ಆಶ್ರಯವಾಗಿದ್ದಿತು. ದಾಸಪ್ಪ ಅವರು ತಮ್ಮ ಮನೆ

ಮತ್ತು ವಕೀಲ ವೃತ್ತಿಯ ಕಛೇರಿಯನ್ನೇ ಕಾಂಗ್ರೇಸ್ ಕಛೇರಿಯನ್ನಾಗಿ ಮಾಡಿಕೊಂಡರು. ದಾಸಪ್ಪ ಅವರ ಬಿರು ಭಾಷಣದ ಪ್ರಯುಕ್ತ ಆಗಾಗ್ಗೆ ಜೈಲು ವಾಸವನ್ನು ಅನುಭವಿಸಬೇಕಾಗುತ್ತಿತ್ತು. ದಾಸಪ್ಪ ದಂಪತಿಗಳ ಜೀವನದ ಬದಲಾವಣೆಯನ್ನು ಕಂಡ ತಾಯಿ ರೇವಮ್ಮ ಅವರು ತುಂಬ ದುಃಖ ಪಡುತ್ತಿದ್ದರು. ಅಳಿಯನೆಂದರೆ ಅವರಿಗೆ ಅತಿಯಾದ ವಿಶ್ವಾಸ ಹಾಗೂ ಗೌರವ, ಆದರೆ ಆತ ತಮ್ಮ ಮಗಳು ಯಶೋಧರಮ್ಮನಂತೆಯೇ ರಾಜಕೀಯಕ್ಕೆ ಇಳಿದು ಹಗಲಿರುಳು ದುಡಿಯುವುದನ್ನು ನೋಡಿ ಬೇಸರಪಟ್ಟರು.

## ರಾಜಕೀಯ ರಂಗ

ಯಶೋಧರಮ್ಮ ಪುರಸಭೆಯ ಚುನಾವಣೆಯಲ್ಲಿ ಪ್ರಚಂಡ ಬಹುಮತಗಳಿಸಿ ಗೆದ್ದ ಪ್ರಥಮ ಮಹಿಳೆ ಆಗಿದ್ದರು. ಹೆಚ್.ಸಿ. ದಾಸಪ್ಪ ಅವರ ದಸ್ತಗಿರಿಯಾದ ಕಾರಣ ಮೈಸೂರು ನ್ಯಾಯವಿಧಾಯಕ ಸಭೆಗೆ ಪ್ರಪ್ರಥಮ ಮಹಿಳಾ ಉಮೇದುವಾರರಾಗಿ ನಿಂತು ಜಯಗಳಿಸಿದರು. ಪ್ರಾರಂಭದಿಂದಲೂ ಮಹಿಳಾ ಪ್ರತಿನಿಧಿಗಳೇ ಇಲ್ಲದ ಸಭೆಗೆ ಮೊದಲ ಭಾರಿಗೆ ಚುನಾಯಿತರಾದ ಕೀರ್ತಿ ಇವರದು. ಮೈಸೂರು ಸಂಸ್ಥಾನದ ಕಾಂಗ್ರೆಸ್‌ನ ಪ್ರಪ್ರಥಮ ಮಹಿಳಾ ಅಧ್ಯಕ್ಷರಾದರು.

ವಾರ್ತಾ ಪತ್ರಿಕೆಗಳ ಮೇಲೆ ಜಾರಿಗೆ ತಂದ ಮಸೂದೆಯನ್ನು ನ್ಯಾಯವಿಧೇಯಕ ಸಭೆಯಲ್ಲಿ ವಿರೋಧಿಸಿ ಮಾತನಾಡಿದರು. ಈ ವಿಷಯಗಳನ್ನು ಸಭೆಯ ಮುಂದೆ ತಂದು ತಮ್ಮ ವಿಷಾಧವನ್ನು ವ್ಯಕ್ತ ಪಡಿಸಿದರು. ಮಸೂದೆಯನ್ನು ಪತ್ರಕರ್ತರ ಮೇಲೆ ಹೇರಬಾರದೆಂದು ಮತ್ತು ಪತ್ರಿಕೆಗಳ ಸಕಾರಾತ್ಮಕ ವಿಚಾರಗಳನ್ನು ಎತ್ತಿ ಹಿಡಿದರು.

ಎರಡನೆಯದಾಗಿ ಜನರಲ್ಲಿರುವ ಮೂಢನಂಬಿಕೆಗಳನ್ನು ಕಡಿಮೆ ಮಾಡಿ ಅವರ ಮನಸ್ಸಿನಲ್ಲಿ ಜಾಗೃತಿಯನ್ನು ಮೂಡಿಸಲು ವಿದ್ಯಾಭ್ಯಾಸ

ಅತ್ಯಗತ್ಯ ಎಂದು ತಿಳಿಸಿದರು. ತಂದೆಯಂತೆ ಮಗಳೂ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಆದ್ಯತೆಯನ್ನಿತ್ತು ಸಮಾಜದ ಉದ್ಧಾರವಾಗಬೇಕೆಂದು ಶ್ರಮಿಸಿದರು. ಸರ್ಕಾರವು ಕಡ್ಡಾಯ ಶಿಕ್ಷಣವನ್ನು ಜಾರಿಗೆ ತರಬೇಕು. ಪ್ರಾಥಮಿಕ ಹಾಗೂ ಪ್ರೌಢಶಾಲೆಗಳಿಗೆ ಹೆಚ್ಚು ಸೌಕರ್ಯಗಳನ್ನು ನೀಡುವುದು ಎಲ್ಲರ ಕರ್ತವ್ಯವೆಂದು ಅಭಿಪ್ರಾಯ ಪಟ್ಟರು.

## ಮೈಸೂರು ಕಾಂಗ್ರೆಸ್

ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸಿದ ಅನೇಕ ಮಹಾಪುರುಷರು ತಮ್ಮ ಜೀವನವನ್ನೇ ಮುಡುಪಿಟ್ಟು ಭಾಗಿಯಾಗಿದ್ದರು. ಇದರಲ್ಲಿ ಮಹಿಳೆಯರ ಪಾತ್ರವು ಮಹತ್ತರವಾದದ್ದು. ಅದರಲ್ಲೂ ಮೈಸೂರು ಸಂಸ್ಥಾನದಲ್ಲಿನ ಅನೇಕ ಮಹಿಳೆಯರು ಸುಬ್ಬಮ್ಮ ಜೋಯಿಸ್, ಬಳ್ಳಾರಿ ಸಿದ್ದಮ್ಮ, ತಾಯಮ್ಮವೀರಣ್ಣಗೌಡ ಮುಂತಾದ ಮಹಿಳೆಯರು ಗಾಂಧೀಜಿ ಅವರ ಕರೆಗೆ ಮಣಿದು ಸಂಗ್ರಾಮದಲ್ಲಿ ಧುಮುಕಿದ್ದರು. ಇಂತಹ ಮಹಿಳೆಯರಲ್ಲಿ ಅಗ್ರ ಗಣ್ಯರಾಗಿ ಯಶೋಧರಮ್ಮ ದಾಸಪ್ಪ ಅವರು ಹೊರಹೊಮ್ಮಿದ್ದರು.

ಪತಿ ದಾಸಪ್ಪ ಅವರ ಸಹಕಾರ ಮತ್ತು ಗಾಂಧೀಜಿ ಅವರ ಪ್ರಭಾವದಿಂದ ಉತ್ತಮ ವಾಗ್ಮಿಯಾಗಿದ್ದ ಯಶೋಧರಮ್ಮ ಅವರು ತಮ್ಮ ಭಾಷಣದ ಮೂಲಕ ಮಹಿಳೆಯರನ್ನು ಹೋರಾಟದಲ್ಲಿ ಭಾಗವಹಿಸುವಂತೆ ಪ್ರೇರೇಪಿಸುತ್ತಿದ್ದರು. ಶ್ರೀಮಂತಿಕೆಯ ಆಡಂಬರವಿಲ್ಲದೆ, ಅಧಿಕಾರದ ಆಸೆಗಳಿಲ್ಲದೆ, ನಿಸ್ವಾರ್ಥ ಸೇವೆ ಸಲ್ಲಿಸುತ್ತಿದ್ದ ದಾಸಪ್ಪ ದಂಪತಿಗಳಿಗೆ ಜನ ಸ್ಪಂದಿಸುತ್ತಿದ್ದರು ಹಾಗೂ ಅವರ ಮಾತಿಗೆ ಮನ್ನಣೆಯನ್ನು ನೀಡುತ್ತಿದ್ದರು.

ಮೈಸೂರು ಪ್ರದೇಶ ಕಾಂಗ್ರೆಸ್‌ಗೆ ಸ್ವಂತ ಕಟ್ಟಡವಿಲ್ಲದ ಸಮಯದಲ್ಲಿ ತಮ್ಮ ಆಸ್ತಿಯನ್ನೇ ಬರೆದು ಕೊಟ್ಟು ಕಟ್ಟಡ ನಿರ್ಮಾಣವನ್ನು

ಮಾಡಿಕೊಟ್ಟವರು ಯಶೋಧರಮ್ಮ ಅವರು. ಕೊನೆಗೆ ಅದನ್ನು ರಾಷ್ಟ್ರೀಯ ಕಾಂಗ್ರೆಸ್ ಘಟಕವನ್ನಾಗಿ ಪರಿಗಣಿಸಲಾಗಿತ್ತು. ತಮ್ಮ ಪಾಲಿಗೆ ಬಂದ ಅಧಿಕಾರದ ಎಲ್ಲಾ ಜವಾಬ್ದಾರಿಯನ್ನು ಕಳಂಕವಿಲ್ಲದೆ ನಿಷ್ಠೆಯಿಂದ ನಡೆಸಿಕೊಂಡು ಹೋಗುತ್ತಿದ್ದ ಜವಾಬ್ದಾರಿಯುತ ಹೆಣ್ಣು ಮಗಳು ಯಶೋಧರಮ್ಮ ಅವರಾಗಿದ್ದಾರೆ. ಕರ್ನಾಟಕಕ್ಕೆ ಯಶೋಧರಮ್ಮ ಅವರಂತಹ ಧೈರ್ಯವಂತ, ಬುದ್ಧಿವಂತ ಮಹಿಳೆಯ ಅವಶ್ಯಕತೆಯೂ ಅತಿ ಮುಖ್ಯವಾಗಿತ್ತು.

## ಶಿವಪುರ ರಾಷ್ಟ್ರಕೂಟ

ಶಿವಪುರ ರಾಷ್ಟ್ರಕೂಟದ ಅಧಿವೇಶನವನ್ನು ಶಿವಪುರದಲ್ಲಿ ನಡೆಸುವುದಾದರೆ ತಾವು ಜವಾಬ್ದಾರಿಯನ್ನು ವಹಿಸಿ ಕೊಳ್ಳುವುದಾಗಿ ಪಿ. ತಿರುಮಲೇಗೌಡರು ಮುಂದಾದರು. ಅವರ ಮನೆಗೆ ಸೇರಿದಂತೆ ವಿಶಾಲವಾದ ಜಮೀನಿತ್ತು. ಅವರು ರಾಷ್ಟಕೂಟ ನಡೆಸಲು ತಮ್ಮ ಜಾಗವನ್ನು ಬಿಟ್ಟುಕೊಡುವ ಭರವಸೆ ಇತ್ತರು. ಆದ್ದರಿಂದ ಮೈಸೂರು ಕಾಂಗ್ರೇಸ್‌ನ ಪ್ರಥಮ ಅಧಿವೇಶನವನ್ನು ಶಿವಪುರದಲ್ಲಿ ನಡೆಸಲು ತೀರ್ಮಾನಿಸಲಾಯಿತು. ಅದಲ್ಲದೆ ಶಿವಪುರ ಗ್ರಾಮವು ವಾಹನ ಸೌಕರ್ಯ ಹಾಗೂ ನೀರಿನ ವ್ಯವಸ್ಥೆಗೆ ಅನುಕೂಲವಾದ ಸ್ಥಳವಾಗಿತ್ತು.

ಒಂದು ತಿಂಗಳ ಅವಧಿಯಲ್ಲಿ ಶಿವಪುರ ರಾಷ್ಟ್ರಕೂಟದ ಸಿದ್ಧತೆ ಹುರುಪಿನಿಂದ ನಡೆಯಿತು. ಕಾರ್ಯಕರ್ತರು ಹಗಲಿರುಳು ದುಡಿದರು. ವಿಷಯಗಳನ್ನು ತುರ್ತಾಗಿ ಜನಗಳಿಗೆ ತಲುಪಿಸಲು ಎಲ್ಲಾ ದಿನಪತ್ರಿಕೆಗಳು ಸಹಕರಿಸಿದವು.

ಟಿ. ಸಿದ್ದಲಿಂಗಯ್ಯ ಅವರ ಅಧ್ಯಕ್ಷತೆಯಲ್ಲಿ ನಡೆದ ಕಾಂಗ್ರೇಸ್ ಕಾರ್ಯಕರ್ತರ ಸಭೆಗೆ ಸಂಸ್ಥಾನದ ಎಂಟೂ ಜಿಲ್ಲೆಗಳಿಂದ ಪ್ರತಿನಿಧಿಗಳು ಸೇರಿದ್ದರು. ಸರ್ಕಾರದ ದಬ್ಬಾಳಿಕೆಯನ್ನು ಪ್ರತಿಭಟಿಸಲು,



ಶಿವಪುರ ಸತ್ಯಾಗ್ರಹ ಸೌಧ : ಶ್ರೀಮತಿ ಯಶೋಧರಾ ದಾಸಪ್ಪ ಅವರ ಹೋರಾಟದ ಕರ್ಮಭೂಮಿ

ಕಾಂಗ್ರೆಸ್ಸಿನ ಧ್ಯೇಯಗಳನ್ನು ಸಾಧಿಸಲು, ಜವಾಬ್ದಾರಿ ಸರ್ಕಾರವನ್ನು ರೂಪಿಸಲು ಆದಷ್ಟು ಬೇಗ ರಾಷ್ಟ್ರಕೂಟವನ್ನು ಸೇರಲು ಉದ್ದೇಶಿಸಿತ್ತು. ತತ್ಸಂಬಂಧವಾಗಿ ಮೈಸೂರಿನಲ್ಲಿ ಸಾಹುಕಾರ್ ಚನ್ನಯ್ಯ ಅವರ ಮನೆಯಲ್ಲಿ ಪ್ರಮುಖ ಸಭೆ ಸೇರಿತು. (ಚನ್ನಯ್ಯ ಅವರನ್ನು ರಾಜಕೀಯ ರಂಗಕ್ಕೆ ಕರೆತಂದವರು ಯಶೋಧರಮ್ಮ ದಾಸಪ್ಪ ಅವರು)

ಬೆಂಗಳೂರು- ಮೈಸೂರು ಹೆದ್ದಾರಿಯಲ್ಲಿ ಮದ್ದೂರಿನ ಬಳಿ ಇರುವ ಶಿವಪುರದಲ್ಲಿ, ಸಂಪೂರ್ಣ ಸಿದ್ಧತೆಯ ಜವಾಬ್ದಾರಿ ವೀರಣ್ಣಗೌಡರದಾಗಿತ್ತು. ಧ್ವಜ ಮೈದಾನ, ಬಹಿರಂಗ ಅಧಿವೇಶನ, ಸಭಾಂಗಣ ಇತ್ಯಾದಿ ಎಲ್ಲವೂ ನಿರ್ಮಾಣವಾಯಿತು. ದಿ.10.04.1938ರ ವೇಳೆಗೆ ಜನರು ಊರೂರುಗಳಿಂದ ಬರಲಾರಂಭಿಸಿದರು. ಗಂಟೆ ಗಂಟೆಗೂ ಜನ ಸಂಖ್ಯೆ ಹೆಚ್ಚುತ್ತಲೇ ಇತ್ತು. ಇದನ್ನು ಕಂಡ ಸರ್ಕಾರವು ಧ್ವಜಾರೋಹಣ ಮಾಡಬಾರದೆಂದು ಆಜ್ಞೆ ವಿಧಿಸಿತು. ಮಾರನೆಯ

ಬೆಳಿಗ್ಗೆ ದಿ.11.04.1938ರಂದು ಧ್ವಜಾರೋಹಣ ನಡೆಯಲೇಬೇಕು ಎಂದು ಸತ್ಯಾಗ್ರಹಿಗಳು ನಿರ್ಧಾರ ಮಾಡಿದರು.

## ಶಿವಪುರದ ಧ್ವಜ ಸತ್ಯಾಗ್ರಹ

ಶಿವಪುರದ ಅಧಿವೇಶನದ ಸ್ಥಳದಲ್ಲಿ ಮಧ್ಯರಾತ್ರಿಯ ವೇಳೆಗೆ 600 ರಿಸರ್ವ್ ಪೋಲೀಸ್ ಹಾಗೂ 1000 ಜನ ಲಾಠಿ ಹಿಡಿದ ಪೋಲಿಸರು ಜಮಾ ಅಗಿದ್ದರು. ಧೈರ್ಯ ಗುಂದದ ನಾಯಕರು ಬೆಳಿಗ್ಗೆ 8 ಗಂಟೆಗೆ ಧ್ವಜಾರೋಹಣ ಮಾಡಲು ಸಜ್ಜಾದರು. ಪ್ರೇಕ್ಷಕರ ಹೊಳೆಯೇ ಹರಿದಿತ್ತು. ಅಧ್ಯಕ್ಷರಾದ ಟಿ. ಸಿದ್ದಲಿಂಗಯ್ಯರವರು ವೇದಿಕೆ ಏರಿದ್ದೇ ತಡ, ಪೋಲಿಸ್ ಅಧಿಕಾರಿಗಳೆಲ್ಲ ಧ್ವಜ ಸ್ಥಂಭದ ಬಳಿಗೆ ಬಂದರು ಧ್ವಜದ ಹಗ್ಗ ಹಿಡಿದರು. ತಕ್ಷಣವೇ ಯಶೋಧರಮ್ಮ ದಾಸಪ್ಪ ಅವರು "ಪೋಲಿಸರು ಧ್ವಜದ ಹಗ್ಗವನ್ನು ಬಿಟ್ಟು ವೇದಿಕೆಯಿಂದ ಇಳಿದು ದೂರ ಸರಿದರೆ, ಜನರ ಉದ್ರೇಕ ಕಡಿಮೆಯಾಗುತ್ತದೆ. ಎಲ್ಲರೂ ಅವರವರ ಕಾರ್ಯ ನಿರ್ವಹಿಸಲು ಪೋಲಿಸರು ಸಹಕರಿಸಬೇಕು" ಎಂದು ಪ್ರಾರ್ಥಿಸಿಕೊಂಡರು. ಜನಸ್ತೋಮವೇ ನೆರೆದಿರುವುದನ್ನು ಕಂಡು ಅಧಿಕಾರಿಗಳು ಪೋಲಿಸರತ್ತ ಆಜ್ಞೆಯಿತ್ತರು. ಅದರಂತೆ ಪೋಲಿಸರೆಲ್ಲ ಹಿಂದಕ್ಕೆ ಸರಿದರು. ಧ್ವಜಾರೋಹಣ ಮಾಡಲು ಹೊರಟ ಟಿ.ಸಿದ್ದಲಿಂಗಯ್ಯ ಅವರನ್ನು ಪೋಲಿಸರು ದಸ್ತಗಿರಿ ಮಾಡಿದರು. ತಕ್ಷಣವೇ ಎಂ.ಎನ್. ಜೋಯಿಸರು ಆವೇಶದಿಂದ ನಾನು ಧ್ವಜಾರೋಹಣ ಮಾಡುತ್ತಿದ್ದೇನೆ ಎಂದು ಹೇಳುತ್ತಾ ಧ್ವಜದ ದಾರವನ್ನು ಎಳೆದು ಬಿಟ್ಟರು. ಪುಷ್ಪವೃಷ್ಟಿ ಮಾಡುತ್ತ ತ್ರಿವರ್ಣ ರಾಷ್ಟ್ರ ಧ್ವಜ ಹರಡಿಕೊಂಡಿತು. ತಕ್ಷಣವೇ ಟಿ. ಸುನಂದಮ್ಮ ಧ್ವಜ ಗೀತೆ ಹಾಡಿಯೇ ಬಿಟ್ಟರು. ಪೋಲೀಸರು ಮುಂದೆ ಬಂದು, ದಾಸಪ್ಪ ಅವರನ್ನು ದಸ್ತಗಿರಿ ಮಾಡಿದರು. ಮಹಾತ್ಮ ಗಾಂಧಿ ಅವರ ತತ್ವವನ್ನು ಅನುಸರಿಸಿದ ಜನ ಶಾಂತರಾಗಿಯೇ ಇದ್ದರು. ಇನ್ನು ಧ್ವಜವನ್ನು ಸಂಜೆಯವರೆಗೆ ಕಾಪಾಡಿಕೊಳ್ಳುವ ಜವಾಬ್ದಾರಿ ಸತ್ಯಾಗ್ರಹಿಗಳದಾಗಿತ್ತು.

## ಧ್ವಜ ರಕ್ಷಣೆ

ಪೋಲಿಸರು ಧ್ವಜದ ಹತ್ತಿರ ಸುಳಿಯದಂತೆ ಧ್ವಜದ ಸುತ್ತಲೂ ಯಶೋಧರಮ್ಮ ದಾಸಪ್ಪ, ಟಿ. ಸುನಂದಮ್ಮ, ಬಳ್ಳಾರಿ ಸಿದ್ದಮ್ಮ, ಸುಬ್ಬಮ್ಮ ಜೋಯಿಸ ಮುಂತಾದವರು ಅನ್ನ ನೀರಿಲ್ಲದೆ ಬಿಸಿಲಿನಲ್ಲಿ ಸಂಜೆಯವರೆಗೆ ಕುಳಿತೇ ಬಿಟ್ಟರು. ಅವರ ಸುತ್ತಲೂ ಸ್ವಯಂ ಸೇವಕಿಯರು ಹಾಗೂ ಉಳಿದ ಕಾರ್ಯಕರ್ತರು ಕುಳಿತಿದ್ದರು. ಶಿವಪುರದ ಧ್ವಜಾರೋಹಣ ಯಾವ ಹಿಂಸಾತ್ಮಕ ಕೃತ್ಯಗಳೂ ಇಲ್ಲದೆ ಶಾಂತವಾಗಿ ನೆರವೇರಿದುದನ್ನು ಇತಿಹಾಸದಲ್ಲಿ ಸುವರ್ಣಾಕ್ಷರಗಳಲ್ಲಿ ಬರೆಯಬೇಕಾದ ಮಹತ್ವ ಪೂರ್ಣವಾದ ಘಟನೆ, ಇದರಲ್ಲಿ ಯಶೋಧರಮ್ಮನ ಪಾತ್ರ ಹಿರಿದಾದುದು. ಉರಿಯುವ ಬಿಸಿಲಿನಲ್ಲಿ ನಿಂತು ಧ್ವಜ ರಕ್ಷಕಿಯಾಗಿ ಯಶೋಧರಮ್ಮ ಅವರು ಭಾಷಣ ಮಾಡಿದ ಸುದ್ದಿಯನ್ನು ಕೇಳಿ ತಾಯಿ ರೇವಮ್ಮ ಸಂಕಟಪಟ್ಟರು. ತನ್ನ ಎರಡು ಗಂಡು ಮಕ್ಕಳನ್ನು ಕಟ್ಟಿಕೊಂಡು ಯಶೋಧರಮ್ಮ ಅವರು ಸಂಜೆಯವರೆಗೆ ಧ್ವಜ ರಕ್ಷಣೆ ಮಾಡಿದರು.

ಮರುವರುಷ ವಿದುರಾಶ್ವತ್ಥದಲ್ಲಿ ನಡೆದ ಕಾಂಗ್ರೇಸ್ ಅಧಿವೇಶನಕ್ಕೆ ಎಚ್. ಸಿ. ದಾಸಪ್ಪನವರೇ ಅಧ್ಯಕ್ಷರು. ಈ ಅಧಿವೇಶನದಲ್ಲಿ ಹಿಂಸಾತ್ಮಕ ಘಟನೆಗಳು ನಡೆದು ಅನೇಕರು ಗೋಲಿಬಾರ್‌ಗೆ ತುತ್ತಾದರು. ಯಶೋಧರಮ್ಮ ಅವರ ಭಾಷಣ ರಾಜ ದ್ರೋಹಕವೆಂದು, ದಾಸಪ್ಪ ಅವರು ಸರ್ಕಾರದ ವಿರುದ್ಧ ಧ್ವಜಾರೋಹಣ ಮಾಡಿದರೆಂದು ದಸ್ತಗಿರಿ ಮಾಡಿ ಇಬ್ಬರನ್ನೂ ಜೈಲಿಗೆ ಒಯ್ದರು.

## ಶಿವಪುರ

ಬೆಂಗಳೂರು-ಮೈಸೂರು ಹೆದ್ದಾರಿಯಲ್ಲಿ ಮದ್ದೂರಿನ ಬಳಿ ಶಿವಪುರದಲ್ಲಿ ಈಗಲೂ ನಿಂತಿರುವ ಭವ್ಯವಾದ ಕಟ್ಟಡ ಸತ್ಯಾಗ್ರಹದ ಕುರುಹಾಗಿ ಉಳಿದಿದೆ. ಯುವಜನರಿಗೆ ಪ್ರೇಕ್ಷಣೀಯ ಮತ್ತು ಪ್ರೋತ್ಸಾಹದಾಯಕ ತಾಣವಾಗಿದೆ. ಕರ್ನಾಟಕದ ಸ್ವಾತಂತ್ರ್ಯ ಸಂಗ್ರಾಮದ ಸ್ಮಾರಕ ಭವನವಾಗಿದೆ.

1940ರಲ್ಲಿ ಜಯಚಾಮರಾಜ ಒಡೆಯರ್ ಅವರ ವಿವಾಹ ಸಂದರ್ಭದಲ್ಲಿ ಜೈಲಿನಲ್ಲಿ ಬಂಧಿತರಾದ ಹೋರಾಟಗಾರರನ್ನು ಬಿಡುಗಡೆ ಮಾಡಿದರು. ಆ ಸಮಯದಲ್ಲಿಯೇ ಯಶೋಧರಮ್ಮ ಮತ್ತು ದಾಸಪ್ಪ ಅವರೂ ಬಿಡುಗಡೆ ಹೊಂದಿದರು. 1942ರಲ್ಲಿ ಮಹಾತ್ಮ ಗಾಂಧೀಜಿ ಅವರು ಸ್ವಾತಂತ್ರ ಹೋರಾಟಕ್ಕೆ "ಮಾಡು ಇಲ್ಲವೆ ಮಡಿ' ಎಂಬ ಕರೆ ಕೊಟ್ಟರು. 'ಬ್ರಿಟೀಷರೇ ಭಾರತವನ್ನು ಬಿಟ್ಟು ತೊಲಗಿ' ಎಂಬ ಕೂಗು ಎಲ್ಲೆಡೆ ಮೊಳಗಿತು. ಈ ಹೋರಾಟದಲ್ಲಿ ಪತಿ-ಪತ್ನಿ ಇಬ್ಬರನ್ನು ಸರ್ಕಾರ ಬಂಧಿಸಿ ಮತ್ತೆ ಸೆರೆಮನೆಗೆ ದೂಡಿತು. ಕಾರಾಗೃಹದಲ್ಲಿದ್ದ, ತಮಗಿಂತ ಚಿಕ್ಕ ವಯಸ್ಸಿನ ಹೆಣ್ಣುಮಕ್ಕಳಿಗೆ ಯಶೋಧರಮ್ಮ ಅವರು ಸಾಂತ್ವನ ಹೇಳಿ ಧೈರ್ಯ ತುಂಬಿ, ದೇಶ ರಕ್ಷಣೆಗಾಗಿ ಪ್ರತಿಯೊಬ್ಬರೂ ನಿರ್ವಹಿಸಬೇಕಿರುವ ಕರ್ತವ್ಯಗಳ ಬಗ್ಗೆ ತಿಳಿಯಪಡಿಸುತ್ತಿದ್ದರು. ಕಾರಾಗೃಹದಿಂದ ಬಿಡುಗಡೆಯಾದ ನಂತರ ಮದ್ರಾಸಿನಲ್ಲಿ ಹಿಂದಿ ಪ್ರಚಾರ ಸಭೆಯ ಬೆಳ್ಳಿ ಹಬ್ಬದಲ್ಲಿ ಪಾಲ್ಗೊಂಡರು. ಮಹಾತ್ಮರ ಒಂದೊಂದು ಮಾತನ್ನು ಭಕ್ತಿ ಪ್ರೇಮದಿಂದ ಸ್ವೀಕರಿಸಿದರು. ಒಬ್ಬ ಅಧ್ಯಾಪಕರ ಸಹಾಯದಿಂದ ಹಿಂದಿ ಭಾಷೆಯನ್ನು ಓದಿ ಬರೆಯಲು ಕಲಿತರು. ಹಿಂದಿ ಭಾಷೆಯಲ್ಲಿ ಮಾತನಾಡಲು ಕಲಿತು ಭಾಷಣ ಮಾಡಬಲ್ಲವರಾದರು. ಇವರಿಂದಾಗಿ ಮುಂದೆ ಅವರಿಗೆ

ಇಡೀ ಭಾರತದ ಜನ ಸಂಪರ್ಕಕ್ಕೆ ಅನುಕೂಲವಾಯಿತು. 1947ರಲ್ಲಿ ಸ್ವಾತಂತ್ರ್ಯ ಬರುವವರೆವಿಗೂ ಗಾಂಧೀಜಿಯವರ ಮಾರ್ಗ ದರ್ಶನದಲ್ಲೇ ಸೇವಾಕಾರ್ಯ ನಿರತರಾದರು. ಅವರು ಉರ್ದು ಕಲಿಯಲು ಪಟ್ಟ ಶ್ರಮವನ್ನು ನೋಡಿ ಗಾಂಧೀಜಿ ಆಶ್ಚರ್ಯ ಪಟ್ಟರು.

## ಸ್ವಾತಂತ್ರ್ಯದ ನಂತರ

ಯಶೋಧರಮ್ಮ ಅವರು ಸಚಿವ ಸಂಪುಟವನ್ನೇರಿದ ಪ್ರಪ್ರಥಮ ಮಹಿಳೆ ಎಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ. ಪ್ರಥಮವಾಗಿ ಎಚ್. ಸಿ. ದಾಸಪ್ಪ ಅವರು ಕೆ.ಸಿ. ರೆಡ್ಡಿ ಅವರ ಮಂತ್ರಿಮಂಡಲದಲ್ಲಿ ಅರ್ಥ ಸಚಿವರಾದರು. ನಂತರ ಕೇಂದ್ರ ಸರ್ಕಾರದ ರೈಲ್ವೆ ಮಂತ್ರಿಗಳಾದರು. ಹೆಚ್.ಸಿ. ದಾಸಪ್ಪ ಅವರು ಪ್ರಥಮ ಬಾರಿಗೆ ಮಂತ್ರಿ ಪದವಿಯನ್ನು ಅಲಂಕರಿಸಿದಾಗ ಯಶೋಧರಮ್ಮ ಅವರು ತಮ್ಮ ಸ್ವಂತದವರನ್ನೆಲ್ಲ ತಮ್ಮ ಮನೆಗೆ ಒಮ್ಮೆ ಊಟಕ್ಕೆ ಕರೆದು ಆತಿಥ್ಯ ನೀಡಿದರು. ಊಟದ ನಂತರ ಎಲ್ಲರನ್ನೂ ಉದ್ದೇಶಿಸಿ ದಾಸಪ್ಪ ಅವರು ಮಂತ್ರಿ ಪದವಿ ಯಲ್ಲಿ ಇರುವುದರಿಂದ ಅವರನ್ನು ಉಪಯೋಗಿಸಿಕೊಂಡು ಅವರ ಶಿಫಾರಸ್ಸಿಗಾಗಿಯಾಗಲಿ ಅಥವಾ ತಮ್ಮ ಅನುಕೂಲಗಳಿಗಾಗಲಿ ಪ್ರಯತ್ನಪಡಬಾರದೆಂದು ವಿನಂತಿಸಿಕೊಂಡರು.

ಯಶೋಧರಮ್ಮ ಅವರು 1950ರಲ್ಲಿ ಮೈಸೂರು ರಾಜ್ಯದ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷೆಯಾಗಿ ನಂತರ ಹಾಸನದಿಂದ ಚುನಾವಣೆಯಲ್ಲಿ ಗೆದ್ದು ಗಾಂಧೀವಾದಿ ಎಸ್. ನಿಜಲಿಂಗಪ್ಪ ಅವರ ಸಂಪುಟದಲ್ಲಿ ಸಮಾಜ ಕಲ್ಯಾಣ ಸಚಿವೆಯಾದರು. ಅವರ ಆಡಳಿತ ಅವಧಿಯಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳ ಕಾರ್ಯಗಳನ್ನು ಮಾಡಿದರು. ಅನೇಕ ಜನಪರ ಶೈಕ್ಷಣಿಕ ಸಾಮಾಜಿಕ, ಆರ್ಥಿಕ ಅನಾನುಕೂಲತೆಗಳನ್ನು ಒದಗಿಸಿದರು. 'ನುಡಿದಂತೆ ನಡೆ' ಎಂಬ

ಮಾತಿನಂತೆ ಕುಟುಂಬದಿಂದ ಮೂರು ದಿನದ ದಲಿತರ ಹೆಣ್ಣು ಮಗುವನ್ನು ದತ್ತು ಸ್ವೀಕರಿಸಿ ಮಗಳಾಗಿ ಸಾಕಿ ಸಲಹಿದರು.



ಶ್ರೀಮತಿ ಯಶೋಧರಮ್ಮ ದಾಸಪ್ಪ ಅವರು ಸಮಾಜ ಕಲ್ಯಾಣ ಸಚಿವರಾಗಿದ್ದಾಗ ಗೌರವ ರಕ್ಷೆ ಪಡೆಯುತ್ತಿರುವ ದೃಶ್ಯ

ಸ್ವಾತಂತ್ರ್ಯಾನಂತರದ ಒಂದೂವರೆ ದಶಕಗಳಿಗೂ ಹೆಚ್ಚು ಕಾಲ ಜಾರಿಯಲ್ಲಿದ್ದ ಪಾನ ನಿಷೇಧ ಮಸೂದೆಯನ್ನು ರದ್ದುಗೊಳಿಸಬೇಕೆಂದು ಸಂಪುಟದಲ್ಲಿ ಚರ್ಚೆ ನಡೆಯಿತು. ಸಮಾಜ ಕಲ್ಯಾಣ ಸಚಿವೆಯಾಗಿದ್ದ ಯಶೋಧರಮ್ಮ ದಾಸಪ್ಪ ಅವರು ಈ ಮಸೂದೆಗೆ ತೀವ್ರ ಆಕ್ಷೇಪ ವ್ಯಕ್ತಪಡಿಸಿದ್ದರು. ಈ ವಿಷಯದಲ್ಲಿ ಸಂಪುಟದಲ್ಲಿದ್ದ ಶೇ.50% ಕ್ಕೂ ಹೆಚ್ಚಿನ ಸಚಿವರಿಂದ ಬೆಂಬಲವೂ ಸಿಕ್ಕಿತ್ತು. ಆದರೆ ಹಣಕಾಸು ಹಾಗೂ ಅಬಕಾರಿ ಸಚಿವರಾಗಿದ್ದ ರಾಮಕೃಷ್ಣ ಹೆಗಡೆಯವರು "ಪಾನ ನಿಷೇಧ ಕಾಯಿದೆಯನ್ನು ಉಲ್ಲಂಘಿಸಿ ಕಾನೂನು ಬಾಹಿರವಾಗಿ ಮದ್ಯ ಮಾರಾಟ ನಡೆಯುತ್ತಿದೆ. ರಾಜ್ಯದ ಗಡಿ ಭಾಗದವರು ಬೇರೆ

ರಾಜ್ಯದಿಂದ ಮದ್ಯವನ್ನು ತಂದು ಕುಡಿಯುತ್ತಿದ್ದಾರೆ. ಇದರಿಂದಾಗಿ ರಾಜ್ಯದ ಬೊಕ್ಕಸಕ್ಕೆ ನಷ್ಟವಾಗುತ್ತಿದೆ. ಆದ್ದರಿಂದ ಮದ್ಯಪಾನ ನಿಷೇಧ ರದ್ದುಗೊಳಿಸುವುದು ಅನಿವಾರ್ಯ" ಎಂದು ಪ್ರತಿಪಾದಿಸಿದರು.

ಇಡೀ ಜೀವಮಾನವನ್ನು ಗಾಂಧೀ ತತ್ವಗಳಿಗೆ ಅರ್ಪಿಸಿಕೊಂಡಿದ್ದ ಯಶೋಧರಮ್ಮ ದಾಸಪ್ಪ ಅವರು ಮದ್ಯಪಾನ ನಿಷೇಧದ ವಿರುದ್ಧ ಪ್ರತಿಭಟಿಸಿದರು. ಸತ್ಯಾಗ್ರಹ ಮಾಡಿದರು. ಆದರೆ ಸಂಪುಟದ ಸಭೆಯಲ್ಲಿ ಯಶೋಧರಮ್ಮ ಪರವಾಗಿ ಮಾತನಾಡಿದ್ದವರೆಲ್ಲ ಮೌನತಾಳಿದರು. ಗಾಂಧೀ ವಾದಿಯಾದ ಅಂದಿನ ಮುಖ್ಯಮಂತ್ರಿಯಾಗಿದ್ದ ನಿಜಲಿಂಗಪ್ಪನವರೇ ಅವರಿಗೆ ಬೆಂಬಲ ನೀಡದೇ ಇದ್ದುದರಿಂದ ಯಶೋಧರಮ್ಮ ದಾಸಪ್ಪ ಅವರು ಮನನೊಂದರು. ಗಾಂಧೀ ತತ್ವ ಪಾಲನೆಯ ನಿಷ್ಠಾವಂತ ಮಹಿಳೆ ಯಶೋಧರಮ್ಮ ದಾಸಪ್ಪ ಅವರು ತತ್ವ ಪಾಲನೆಯ ಸಲುವಾಗಿ ಮಂತ್ರಿ ಪದವಿಗೆ ರಾಜೀನಾಮೆ ಸಲ್ಲಿಸಿ, ಸರ್ಕಾರಿ ವಸತಿಗೃಹವನ್ನು ತಕ್ಷಣವೇ ಖಾಲಿ ಮಾಡಿ ಸ್ವಗೃಹಕ್ಕೆ ಮರಳಿದ ಸ್ವಾಭಿಮಾನಿ ಮಹಿಳೆ.

ಮದ್ಯಪಾನ ನಿಷೇಧ ತೆಗೆದು ಹಾಕಿದ ವಿಚಾರದಲ್ಲಿ ಅದನ್ನು ಪ್ರತಿಭಟಿಸಿ ಯಶೋಧರಮ್ಮ ಅವರು ನಿಜಲಿಂಗಪ್ಪ ಅವರ ಸಂಪುಟಕ್ಕೆ ರಾಜೀನಾಮೆ ಕೊಟ್ಟಿದ್ದರೂ, ಅವರಲ್ಲಿನ ಪರಸ್ಪರ ವಿಶ್ವಾಸ ಮತ್ತು ಗೌರವಕ್ಕೆ ಯಾವ ಧಕ್ಕೆಯೂ ಇರಲಿಲ್ಲ. ಅವರ ಸಿದ್ಧಾಂತಗಳು, ನಂಬಿಕೆಗಳು, ಅಭಿಪ್ರಾಯಗಳು ಭಿನ್ನವಾಗಿರುತ್ತಿದ್ದವೇ ಹೊರತು, ಅವರಲ್ಲಿ ವೈಮನಸ್ಸುಗಳಿಗೆ ಆಸ್ಪದವಿರುತ್ತಿರಲಿಲ್ಲ. ಒಂದೇ ಪಕ್ಷದಲ್ಲಿ ಅವರು ಮತ್ತೆ ಅನ್ಯೋನ್ಯತೆಯಿಂದ ಕೆಲಸ ಮಾಡುತ್ತಿದ್ದರು. ಇದು ಪ್ರಜಾಪ್ರಭುತ್ವದ ಹಿತದೃಷ್ಟಿಯಿಂದ ಅತಿ ಅಮೂಲ್ಯ ನಡವಳಿಕೆ ಎಂದೇ ಪರಿಗಣಿಸಬಹುದು.

## ಕಸ್ತೂರ್‌ಬಾ ಗಾಂಧಿ ಸ್ಮಾರಕ ಟ್ರಸ್ಟ್‌ನ ಸ್ಥಾಪನೆ

ಕಸ್ತೂರ್‌ಬಾ ಅವರು ಆಗಾಖಾನ್ ಸೆರೆಮನೆಯಲ್ಲಿ ನಿಧನರಾದ ಮೇಲೆ ಅವರ ಹೆಸರಿನಲ್ಲಿ 'ಕಸ್ತೂರಬಾ ಗಾಂಧಿ ಪ್ರತಿಷ್ಠಾನ'ವನ್ನು ಪ್ರಾರಂಭಿಸಲಾಯಿತು. ಪ್ರತಿಷ್ಠಾನದ ನಿಧಿ ಸಂಗ್ರಹಣಾ ಕಾರ್ಯದಲ್ಲಿ ಅಮೃತ ಲಾಲ್ ಥಕ್ಕರ್‌ರವರ ಸೇವೆ ಗಣನೀಯವಾದದ್ದು. ಥಕ್ಕರ್ ಪ್ರತಿಷ್ಠಾನದ 'ಬಾಪಾ' ಎಂದೇ ಹೆಸರುವಾಸಿಯಾಗಿದ್ದರು. ಗಾಂಧೀಜಿ ಅವರು ಇವರನ್ನು 'ಪುಟ್ಟ ಮಹಾತ್ಮ' ಎಂದು ಕರೆಯುತ್ತಿದ್ದುದು ಉಂಟು. 'ಕಸ್ತೂರಬಾ ಗಾಂಧಿ ಸ್ಮಾರಕ ಟ್ರಸ್ಟ್'ನ್ನು ರಾಷ್ಟ್ರದ ವಿವಿಧ ಕ್ಷೇತ್ರಗಳಲ್ಲಿ ಪ್ರಾರಂಭ ಮಾಡಲಾಯಿತು. ಸ್ವತಃ ಗಾಂಧೀಜಿ ಅವರೇ ಟ್ರಸ್ಟನ ಪ್ರಥಮ ಅಧ್ಯಕ್ಷರಾದರು. ಥಕ್ಕರ್ ಬಾಪಾರವರು ಪ್ರಧಾನ ಕಾರ್ಯದರ್ಶಿಗಳಾಗಿದ್ದು, ಸುಚೇತ ಕೃಪಲಾನಿ ಅವರು ಕಾರ್ಯದರ್ಶಿಗಳಾಗಿದ್ದು ಸೇವೆ ಸಲ್ಲಿಸಿದ್ದರು. ಗಾಂಧೀಜಿ ಅವರ ಸೇವಾ ಗ್ರಾಮದಲ್ಲೇ ಹಲವು ಕಾಲ ನೆಲಸಿದ್ದ ಹೆಚ್.ಸಿ. ದಾಸಪ್ಪ ಹಾಗೂ ಯಶೋಧರಮ್ಮ ದಂಪತಿಗಳಿಗೆ ಪುನ: ಗಾಂಧೀಜಿ ಅವರಿಗಾಗಿ ಸೇವೆ ಸಲ್ಲಿಸುವ ಸದವಕಾಶ ದೊರೆಯಿತು. ಗಾಂಧೀಜಿ ಅವರು ಸ್ವತಃ ತಾವೇ ಯಶೋಧರಮ್ಮ ಅವರನ್ನು 'ಕಸ್ತೂರ್‌ಬಾ ಗಾಂಧಿ ರಾಷ್ಟ್ರೀಯ ಸ್ಮಾರಕ ಟ್ರಸ್ಟ್' ಮೈಸೂರು ಶಾಖೆಗೆ ಪ್ರತಿನಿಧಿಯನ್ನಾಗಿ ನೇಮಿಸಿದರು. ಆಗ ಯಶೋಧರಮ್ಮ ಹಾಗೂ ದಾಸಪ್ಪ ದಂಪತಿಗಳ ಆಪ್ತರಾಗಿದ್ದ ಚಕ್ರವರ್ತಿ ಸಿ. ರಾಜಗೋಪಾಲಾಚಾರಿ ಅವರು ರಚನಾತ್ಮಕ ಕಾರ್ಯಕ್ಕೆ ದಾಸಪ್ಪ ಅವರ ಮನೋಧರ್ಮ ಹೊಂದಿಕೊಳ್ಳುತ್ತದೆ. ಆದರೆ ರಾಜಕಾರಣಕ್ಕೆ ತಕ್ಕ ದಿಟ್ಟತನ ಚಾಣಾಕ್ಷತೆ ಮತ್ತು ಲೋಕ ಜ್ಞಾನವಿರುವಂತಹ ಯಶೋಧರಮ್ಮ ಅವರಿಗೆ 'ಕಸ್ತೂರ್‌ಬಾ ಸೇವಾ ಗ್ರಾಮದ' ಶ್ರಮದ ಜವಾಬ್ದಾರಿಯನ್ನು ಗಾಂಧೀಜಿ ಅವರು ವಹಿಸಿದರಲ್ಲ, ಏಕೆ ಹೀಗೆ ಮಾಡಿದರು? ಎಂದು ಆಶ್ಚರ್ಯ ಪಟ್ಟರು. ಅದಕ್ಕೆ ಬಾಪು ಅವರು " ಯಶೋಧರ ಬಹದ್ದೂರ್ ಹೆಣ್ಣು

ಮಗಳು. ಅವರ ಸಾಮರ್ಥ್ಯದಲ್ಲಿ ನನಗೆ ಸಂಪೂರ್ಣ ವಿಶ್ವಾಸವಿದೆ. ಕಸ್ತೂರ್‌ಬಾ ಟ್ರಸ್ಟ್ ಕಾರ್ಯಕ್ರಮಗಳನ್ನು ಅವರು ಜೀವ ಕೊಟ್ಟಾದರೂ ನಿಭಾಯಿಸಬಲ್ಲರು" ಎಂಬ ನಂಬಿಕೆಯ ಮಾತನಾಡಿದರು.



ಅರಸೀಕೆರೆಯಲ್ಲಿ ಕಸ್ತೂರಬಾ ಗಾಂಧೀ ರಾಷ್ಟ್ರೀಯ ಟ್ರಸ್ಟ್ ಕಟ್ಟಡದ ಶಂಕುಸ್ಥಾಪನೆಯಲ್ಲಿ ಯಶೋಧರಮ್ಮ ದಾಸಪ್ಪ ಅವರು

## ರಚನಾತ್ಮಕ ಕಾರ್ಯಗಳು

ರಾಜಕೀಯವನ್ನು ತೊರೆದ ಯಶೋಧರಮ್ಮ ದಾಸಪ್ಪ ಅವರು ಹೆಣ್ಣು ಮಕ್ಕಳ ಹಾಗೂ ಮಹಿಳೆಯರ ಸ್ವಾವಲಂಬನೆ ಕಡೆಗೆ ಹೆಚ್ಚು ಗಮನ ಕೊಟ್ಟರು. ಯಶೋಧರಮ್ಮ ಅವರು ಜವಾಬ್ದಾರಿಯುತ ಅನೇಕ ರಚನಾತ್ಮಕ ಕಾರ್ಯಗಳನ್ನು ಹೆಣೆದುಕೊಂಡರು. ಮಹಿಳೆಯರಿಗೆ ಖಾದಿ ನೂಲುವುದು, ಹೊಲಿಗೆ, ಕಸೂತಿ ಮುಂತಾದವುಗಳನ್ನು ಕಲಿಸಿದರು. ಹೆಣ್ಣುಮಕ್ಕಳಿಗಾಗಿ ಶಾಲೆಗಳು, ಕಿರಿಯರಿಗೆ ಬಾಲವಿಹಾರ ಮುಂತಾದವುಗಳನ್ನು ಸ್ಥಾಪಿಸಿದರು. ಪ್ರಸೂತಿ ಕೇಂದ್ರಗಳನ್ನು

ಪ್ರಾರಂಭಿಸಿದರು. 'ಕಸ್ತೂರ್‌ಬಾ ಗ್ರಾಮ'ವನ್ನೇ ಸೃಷ್ಟಿಸುವ ಹುಮ್ಮಸ್ಸು ಅವರಲ್ಲಿತ್ತು. ಆದರೆ ಜಾಗದ ಅಭಾವ ಕಾಡುತ್ತಿತ್ತು. ಕೊನೆಗೆ ಅರಸೀಕೆರೆಯ ಹತ್ತಿರ ಪಾಳು ಬಿದ್ದಿದ್ದ 86 ಎಕರೆ ಸರ್ಕಾರದ ಜಮೀನನ್ನು ಕಂದಾಯ ಮಂತ್ರಿಗಳಾಗಿದ್ದ ಎಚ್. ಸಿದ್ದಯ್ಯ ಅವರಿಂದ ಪಡೆದು ಅಬಾದ್ದು ಮಾಡಿ ತೆಂಗಿನ ಸಸಿಗಳನ್ನು ನೆಟ್ಟು ಸಂಪನ್ಮೂಲದ ವ್ಯವಸ್ಥೆ ಮಾಡಿಕೊಂಡರು. ಅದರಂತೆ ಯಶೋಧರಮ್ಮ ಅವರು ಮತ್ತಿತ್ತರ ಸೇವಾ ಕೇಂದ್ರಕ್ಕೂ ಹತ್ತಾರು ಎಕರೆ ಜಮೀನನ್ನು ಪಡೆದು ಸ್ವಾವಲಂಬಿ ಕೇಂದ್ರಗಳನ್ನಾಗಿ ಮಾಡಿದರು. ಸರ್ಕಾರ ಹಾಗೂ ಸಾರ್ವಜನಿಕರ ಸಹಾಯದಿಂದ ಬೇಸಾಯಕ್ಕೂ ವ್ಯವಸ್ಥೆ ಮಾಡಿದರು.



ದತ್ತು ಪುತ್ರಿ ಪ್ರಭಾಚಂಪ – ಮೋಹನ್ ಅವರ ವಿವಾಹ ಸಂದರ್ಭದಲ್ಲಿ
(ಎಡದಿಂದ) ಸರೋಜಮ್ಮ, ಯಶೋಧರಮ್ಮ ದಾಸಪ್ಪ, ಸುಚೇತ ಕೃಪಲಾನಿ,
ಪ್ರಭಾ, ಮೋಹನ್, ಆಚಾರ್ಯ ಕೃಪಲಾನಿ, ರಾಮದಾಸ್ ಮತ್ತು ತುಳಸೀದಾಸ್

## ಗ್ರಾಮೀಣ ಮಹಿಳೆಯರ ಒಲವು

ಗ್ರಾಮೀಣ ಮಹಿಳೆಯರ ಹಾಗೂ ಮಕ್ಕಳ ಕ್ಷೇಮಾಭಿವೃದ್ಧಿಗೆ ಅನೇಕ ಯೋಜನೆಗಳನ್ನು ಹಮ್ಮಿಕೊಂಡರು. ಸಂಬಳ ಕೊಡಲು ಹಣವಿಲ್ಲದ ಸಮಯದಲ್ಲಿ ತಮ್ಮ ಆಭರಣಗಳನ್ನು ಬ್ಯಾಂಕಿನಲ್ಲಿ ಇಟ್ಟು ಹಣ ತಂದು ಸಂಬಳ ವಿತರಣೆ ಮಾಡುತ್ತಿದ್ದರು. ಸೇವಾ ಕೇಂದ್ರಗಳು ಹೆಚ್ಚಿದಂತೆ ಓಡಾಟವೂ ಹೆಚ್ಚಾಯಿತು. ಆಗ ವಾಹನದ ಅಗತ್ಯತೆ ಅನಿವಾರ್ಯವಾಯಿತು. ಅದಕ್ಕಾಗಿ ಯಶೋಧರಮ್ಮ ಅವರು ತಮ್ಮ ಕೈಗಳಲ್ಲಿದ್ದ ಬಳೆಗಳನ್ನೇ ಮಾರಿ ವಾಹನ ಖರೀದಿ ಮಾಡಿದ್ದರು.

ತಮ್ಮ ದತ್ತು ಪುತ್ರಿ ಪ್ರಭಾಳ ಮದುವೆಯನ್ನು ಒಬ್ಬ ವೈದ್ಯನ ಜೊತೆ ಕಸ್ತೂರಬಾ ಆಶ್ರಮದಲ್ಲಿ ನೆರೆವೇರಿಸಿದರು. ಅತಿಶಯವೆಂದರೆ ಈ ವಿವಾಹದಲ್ಲಿ ಸುಚೇತ ಕೃಪಲಾನಿ ಹಾಗೂ ಜೆ.ಬಿ ಕೃಪಲಾನಿ ಮತ್ತು ಅನೇಕ ಗಣ್ಯರು ಪಾಲ್ಗೊಂಡಿದ್ದರು. ಅರಸೀಕೆರೆಯ



ಅರಸೀಕೆರೆಯ ಕಸ್ತೂರಬಾ ಆಶ್ರಮದ ಸ್ವಯಂ ಸೇವಕಿಯರೊಂದಿಗೆ

ಕನ್ಯಾ ಆಶ್ರಮದಲ್ಲಿ (ಕಸ್ತೂರಬಾ ವಿದ್ಯಾಲಯ) ಓದುತ್ತಿದ್ದ ಸರೋಜ ಎಂಬ ಬಡ ಕುಟುಂಬದ ಹೆಣ್ಣುಮಗಳನ್ನು ತಮ್ಮ ಎರಡನೆಯ ಮಗ ತುಳಸಿದಾಸಪ್ಪನಿಗೆ, ಅದೇ ಕಸ್ತೂರಬಾ ಆಶ್ರಮದಲ್ಲಿ ಸರಳವಾಗಿ ಮದುವೆ ಮಾಡಿದರು. ದೊಡ್ಡ ಮನೆತನದಲ್ಲಿ ಹುಟ್ಟಿ ವಿಶಾಲವಾದ ಹೃದಯವುಳ್ಳ, ಸರಳ ಜೀವಿಯಾದ ಯಶೋಧರಮ್ಮ ಅವರ ನಿಸ್ವಾರ್ಥ, ತ್ಯಾಗ ಜೀವನವನ್ನು ನೋಡಿದ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರು "ಈ ದೇಶದಲ್ಲಿ ದೇವರೇ ಹುಟ್ಟಿ ಬಂದರೂ ಇಷ್ಟು ಕೆಲಸ ಮಾಡಲು ಸಾಧ್ಯವಿಲ್ಲ ಎಂತಲೂ, ಮುಖ್ಯವಾಗಿ ದೀನ ದಲಿತರ, ಸ್ತ್ರೀಯರ, ನಿರ್ಗತಿಕರ, ಮಕ್ಕಳ ಹಾಗೂ ಸಮಾಜ ಕಡೆಗಣಿಸಿದ ಎಲ್ಲರ ಸೇವೆಯನ್ನು ಮಾಡಿದ್ದಾರೆ" ಎಂದು ವರ್ಣಿಸಿ ಯಶೋಧರಮ್ಮ ಅವರನ್ನು 'ಕರ್ನಾಟಕದ ಕಸ್ತೂರಬಾ' ಎಂದು ಕರೆದಿದ್ದಾರೆ. ಗಾಂಧೀಜಿ ಅವರ ಸೇವಾಕಾರ್ಯಗಳನ್ನು ಸಮರ್ಥವಾಗಿ ಮುಂದುವರಿಸಿದ ಕೀರ್ತಿ ಯಶೋಧರಮ್ಮ ಅವರದ್ದಾಗಿದೆ.

ಮೈಸೂರಿನ ಯಾದವಗಿರಿಯಲ್ಲಿ ಅಂಥ ಹೆಣ್ಣು ಮಕ್ಕಳಿಗೆ ಅನುಕೂಲವಾಗುವಂತೆ ವಸತಿ ಶಾಲೆಯನ್ನು ಸ್ಥಾಪಿಸಿ, ಅಲ್ಲಿ ಸಂಗೀತ ಮತ್ತೆ ಚಿತ್ರ ಕಲೆಯಲ್ಲಿ ತರಬೇತಿ ನೀಡುವ ವ್ಯವಸ್ಥೆಯನ್ನು ಮಾಡಿದ್ದರು.

ಯಶೋಧರಮ್ಮ ತಮ್ಮ ಸಂಸ್ಥೆಗಳ ಗುಣಮಟ್ಟ ಹೆಚ್ಚಿಸುವ ಹಾಗೂ ಅಭಿವೃದ್ಧಿ ಪಡಿಸುವ ಸದುದ್ದೇಶದಿಂದ ಆಗಾಗ ಪ್ರವಾಸವನ್ನು ಕೈಗೊಳ್ಳುತ್ತಿದ್ದರು. ಹೀಗೊಮ್ಮೆ ದಂಪತಿ ಸಮೇತರಾಗಿ ಕೀನ್ಯಾ ದೇಶಕ್ಕೆ ಹೋಗಿದ್ದರು. ಅಲ್ಲಿ ಕೀನ್ಯಾದ ರಾಷ್ಟ್ರಾಧ್ಯಕ್ಷ 'ಜೈರೋ ಕೆನಾಟ' ಅವರನ್ನು ಭೇಟಿ ಮಾಡಿದ್ದರು. ಕೀನ್ಯಾ ಮಹಿಳಾ ಸೇವಾ ಸಂಸ್ಥೆಗಳನ್ನು, ಅಲ್ಲಿನ ಹೆಣ್ಣು ಮಕ್ಕಳು ತಯಾರಿಸಿದ ಕರಕುಶಲ ವಸ್ತುಗಳನ್ನು ವೀಕ್ಷಿಸಿ ಬಂದಿದ್ದರು.

ಹೆಣ್ಣು ಮಕ್ಕಳಿಗೆ ಸ್ವಯಂ ಉದ್ಯೋಗ ಕಲ್ಪಿಸುವ ಸಲುವಾಗಿ ಗಡಿಯಾರ ಮತ್ತು ಟೆಲಿಫೋನ್‌ಗಳ ಬಿಡಿ ಭಾಗಗಳನ್ನು ತಯಾರಿಸುವ ಘಟಕಗಳನ್ನು ಸ್ಥಾಪಿಸಿದ್ದರು. ಇವರ ಸಾರ್ವಜನಿಕ ಸೇವಾ ಕಾರ್ಯವನ್ನು ಪರಿಗಣಿಸಿ 1973 ರಲ್ಲಿ ಪದ್ಮವಿಭೂಷಣ ಪ್ರಶಸ್ತಿಯನ್ನು ಶ್ರೀಮತಿ ಯಶೋಧರಮ್ಮ ದಾಸಪ್ಪ ಅವರಿಗೆ ಪ್ರಧಾನ ಮಾಡಿ ಗೌರವಿಸಲಾಗಿತ್ತು.

ಅರಸೀಕೆರೆಯ ಕಸ್ತೂರಬಾ ಗಾಂಧಿ ರಾಷ್ಟ್ರೀಯ ಸ್ಮಾರಕ ಟ್ರಸ್ಟ್‌ನ್ನು 1947 ರಲ್ಲಿ ಪ್ರಾರಂಭ ಮಾಡಿದಾಗ ಯಶೋಧರಮ್ಮ ಅವರು "ತಮ್ಮ ತಲೆಯ ಮೇಲೆ ಕೈಯಿಟ್ಟು ತಮಗೆ ಆಶೀರ್ವಾದ ಮಾಡಿ ಎಂದು ಗಾಂಧೀಜಿ ಅವರನ್ನು" ಕೇಳಿಕೊಂಡರು. "ಕೊನೆಯವರೆಗೂ ಇಲ್ಲೇ ಸೇವೆ ಮಾಡಿ ಮಡಿಯುವೆನೆಂದು ಮಾತು ಕೊಟ್ಟರೆ ಮಾತ್ರ



ಕೀನ್ಯಾ ರಾಷ್ಟ್ರಾಧ್ಯಕ್ಷ ಜೈರೋ ಕೆನಾಟರವರ ಜೊತೆ ದಾಸಪ್ಪ ದಂಪತಿಗಳು



ಕೀನ್ಯಾ ಮಹಿಳಾ ಸಂಸ್ಥೆಗಳು ತಯಾರಿಸಿದ ಕರಕುಶಲ ವಸ್ತುಗಳ ವೀಕ್ಷಣೆ

ಆಶೀರ್ವಾದ ಮಾಡುವುದಾಗಿ" ಗಾಂಧೀಜಿ ಅವರು ಹೇಳಿದರು. ಅವರಿಂದ ಭಾಷೆ ತೆಗೆದುಕೊಂಡ ಗಾಂಧೀಜಿ ಅವರು ಯಶೋಧರಮ್ಮ ಅವರಿಗೆ ಆಶೀರ್ವಾದ ಮಾಡಿದ್ದರು. ಅದರಂತೆ ಯಶೋಧರಮ್ಮ ಅವರು ತಮ್ಮ ಸರ್ವಸ್ವವನ್ನೂ ತ್ಯಾಗ ಮಾಡಿ ಕೊನೆಯವರೆಗೆ ಅಲ್ಲಿಯೇ ದುಡಿದರು. ಯಶೋಧರಮ್ಮ ಅವರು ಅಂತ್ಯಕಾಲದಲ್ಲಿ ಕ್ಯಾನ್ಸರ್ ಖಾಯಿಲೆಯಿಂದ ಬಹಳ ಬಳಲಿದರು. ಆದರೆ ಕೊನೆಯ ಉಸಿರಿನವರೆಗೂ ಅವರ ಹುಮ್ಮಸ್ಸು ಕುಂದಿರಲಿಲ್ಲ. ರಾಮನಾಮದಲ್ಲಿ ಭಕ್ತಿ ಹೆಚ್ಚು. ಭಜನಾವಳಿಯು ಸದಾ ಪಕ್ಕದಲ್ಲಿ ಇರುತ್ತಿತ್ತು. ರಾಮನಾಮವನ್ನು ಬರೆಯುತ್ತಿದ್ದರು. 1980ರ, ಜೂನ್ ಇಪ್ಪತ್ತರ ರಾತ್ರಿ (20–06–1980) ದೈವಾಧೀನರಾದರು. ಗಾಂಧೀಜಿ ಅವರ ಆಸೆಯಂತೆ ಕಸ್ತೂರಬಾ ಗ್ರಾಮದಲ್ಲೇ ಸಮಾಧಿಯಾದರು. ಹೆಣ್ಣು ಮಕ್ಕಳ ಅಭ್ಯುದಯಕ್ಕಾಗಿ ದುಡಿಯುತ್ತಿದ್ದ ಚೇತನ ನಿಶ್ಚೇತನವಾಯಿತು. ಅರಸೀಕೆರೆಯ ಆಶ್ರಮದಲ್ಲಿ ಅವರ ಸಮಾಧಿ ಮಾಡಲಾಗಿದೆ.



ಅರಸೀಕೆರೆ ಬಳಿ ಕಸ್ತೂರ ಬಾ ಟ್ರಸ್ಟ್‌ನಲ್ಲಿರುವ ಮಹಾತ್ಮ ಗಾಂಧೀಜಿಯವರ ಚಿತಾಭಸ್ಮದ ಸ್ಮಾರಕ

ಸಮಾಜ ಸುಧಾರಣಾವಾದಿ ಕೆ.ಹೆಚ್. ರಾಮಯ್ಯ ಅವರ ಸುಪುತ್ರಿಯಾಗಿ ಜನಾನುರಾಗಿ ಹೆಚ್.ಸಿ. ದಾಸಪ್ಪ ಅವರ ಧರ್ಮ ಪತ್ನಿಯಾಗಿ, ಗಾಂಧೀಜಿಯವರ ನೆಚ್ಚಿನ ಅನುಯಾಯಿಯಾಗಿ, ಸ್ವಾತಂತ್ರ್ಯ ಹೋರಾಟದ ನಾಯಕಿಯಾಗಿ, ನಿಷ್ಠಾವಂತ ಸಚಿವರಾಗಿ, ಮಮತಾಮಯಿ ತಾಯಿಯಾಗಿ, ಹಿಂದುಳಿದ ಜನಾಂಗದ ಹಾಗೂ ನಿರ್ಗತಿಕ ಮಹಿಳೆಯರ ಆಧಾರ ಸ್ತಂಭವಾಗಿ, ಎಲ್ಲಾ ಕ್ಷೇತ್ರಗಳಲ್ಲೂ ಲೋಪವಿಲ್ಲದೆ ತನ್ನ ಕರ್ತವ್ಯವನ್ನು ನಿರ್ವಹಿಸಿದ ಕನ್ನಡದ ದಿಟ್ಟ ಮಹಿಳೆ ಯಶೋಧರಮ್ಮ ದಾಸಪ್ಪನವರಾಗಿದ್ದಾರೆ. ಇಂದಿನ ಹಾಗೂ ಮುಂದಿನ ಪೀಳಿಗೆ ಇವರ ಆದರ್ಶವನ್ನು ಪಾಲಿಸಲಿ, ಇವರ ದಿಟ್ಟ ಹೆಜ್ಜೆಯನ್ನು ಅನುಸರಿಸಲಿ ಎಂಬ ಹಂಬಲ ಮತ್ತು ಆಶಯ ನಮ್ಮೆಲ್ಲರದು.

## ಅರಸೀಕೆರೆ ಕಸ್ತೂರ್‌ಬಾ ಗಾಂಧಿ ಆಶ್ರಮ

ಅರಸೀಕೆರೆಗೆ 3 ಕಿ.ಮೀ. ದೂರದಲ್ಲಿ ಮೈಸೂರು ರಸ್ತೆಯಲ್ಲಿ 1947ರಲ್ಲಿ ಸ್ಥಾಪಿತವಾದ ಕಸ್ತೂರ್‌ಬಾ ಗಾಂಧೀ ಆಶ್ರಮ ಕರ್ನಾಟಕದ ಸಬರಮತಿ ಆಶ್ರಮವೆಂದೇ ಪ್ರಖ್ಯಾತವಾಗಿದೆ. ಆಚಾರ್ಯ ವಿನೋಭಾ ಭಾವೆ ಅವರು ಇಲ್ಲಿ ಶಿಬಿರಗಳನ್ನು ಮಾಡಿದ್ದರೆಂದು ದಾಖಲೆಗಳು ಹೇಳುತ್ತವೆ. ಲೋಕನಾಯಕ ಜಯಪ್ರಕಾಶ್ ನಾರಾಯಣ್ ಉತ್ತರ ಪ್ರದೇಶದ ಮೊದಲ ಮಹಿಳಾ ಮುಖ್ಯಮಂತ್ರಿ ಆದ ಸುಚೇತನ ಕೃಪಲಾನಿ, ಶಿಕ್ಷಣ ಸಚಿವರಾಗಿದ್ದ ಜೆ.ಬಿ. ಕೃಪಲಾನಿ, ಕಸ್ತೂರ್‌ಬಾ ಗಾಂಧೀ ಆಶ್ರಮದ ಸಂಸ್ಥಾಪಕ ಕಾರ್ಯದರ್ಶಿ ಟಕ್ಕರ್ ಬಾಪ್ ಮುಂತಾದ ಗಣ್ಯರು ಭಾಗವಹಿಸಿದ್ದ ಪವಿತ್ರವಾದ ಸ್ಥಳ ಇದಾಗಿದೆ.

ಕೇಂದ್ರ ರೈಲ್ವೆ ಸಚಿವರಾಗಿದ್ದಾಗ ಹೆಚ್.ಸಿ.ದಾಸಪ್ಪ ಅವರು ದಿನಾಂಕ 30–01–1948 ರಂದು ಸಂಜೆ 5–00 ಗಂಟೆಗೆ ಇನ್ನೂ ಪ್ರಾರ್ಥನಾ ಸಭೆಯಲ್ಲಿದ್ದರು. ಗಾಂಧೀಜಿಯವರು ಹಂತಕರ ಗುಂಡಿಗೆ ಬಲಿಯಾದಾಗ ಅದರ ಶಬ್ಧ ಕೇಳಿ ದಾಸಪ್ಪ ಅವರು ಅಲ್ಲಿಗೆ ಧಾವಿಸಿದರು. ಅಲ್ಪ ಸ್ವಲ್ಪ ಪ್ರಾಣವಿರಬಹುದೆಂದು ಕುಸಿದು ಬಿದ್ದದ್ದ ಗಾಂಧೀಜಿ ಅವರಿಗೆ ತಕ್ಷಣವೇ ಪಕ್ಕದಲ್ಲಿದ್ದ ನೀರಿನ ಬಾಟಲಿಯ ಮುಚ್ಚಳದಿಂದ ಎರಡು ತೊಟ್ಟು ನೀರು ಹಾಕಿದರು. ಇದು ದಾಸಪ್ಪ ಅವರು ಮಹಾತ್ಮರಿಗೆ ಸಲ್ಲಿಸಿದ ಅಂತಿಮ ಸೇವೆ. ಈ ಮುಚ್ಚಳವನ್ನು ಜೋಪಾನವಾಗಿ ತಂದು ಯಶೋಧರಮ್ಮ ಅವರಿಗೆ ಕೊಟ್ಟರು.

ಮುಂದೆ ಗಾಂಧೀಜಿ ಅವರ ಚಿತಾಭಸ್ಮವನ್ನು ದೆಹಲಿಯಿಂದ ಅರಸೀಕೆರೆ ಕಸ್ತೂರ್‌ಬಾ ಆಶ್ರಮಕ್ಕೆ ತಂದಾಗ, ಗಾಂಧೀಜಿ ಅವರಿಗೆ ಎರಡು ತೊಟ್ಟು ನೀರು ಕುಡಿಸಿದ ಆ ಮುಚ್ಚಳವನ್ನು ಅದರ ಜೊತೆ ಇಟ್ಟು ಸ್ಮಾರಕ ನಿರ್ಮಾಣ ಮಾಡಲಾಯಿತು.

2016ರಲ್ಲಿ ಗಾಂಧೀಜಿಯ ಅನುಯಾಯಿಗಳೂ ಹಾಗೂ ಮಾಜಿ ಮಂತ್ರಿಗಳಾಗಿದ್ದ ಎಂ. ಚಂದ್ರಶೇಖರ್ ಅವರ ಧರ್ಮ ಪತ್ನಿ ಸರೋಜಮ್ಮ, ಮಗ ಎಂ.ಸಿ. ನರೇಂದ್ರ ಮತ್ತು ಕುಟುಂಬದವರು ಅರಸೀಕರೆಯಲ್ಲಿ ಗಾಂಧೀಜಿ ಅವರ ಸ್ಮಾರಕವನ್ನು ನಿರ್ಮಾಣ ಮಾಡಿ, ರಾಷ್ಟ್ರದ ಎರಡನೇ ರಾಜ್‌ಘಾಟ್ ಆಶ್ರಮವನ್ನು ಪ್ರೇಕ್ಷಣೀಯ ಸ್ಥಳವನ್ನಾಗಿಸಿದ್ದಾರೆ.



ಎರಡನೇ ರಾಜ್‌ಘಾಟ್‌ನಂತೆ 2016ರಲ್ಲಿ ಮರು ನಿರ್ಮಾಣಗೊಂಡಿರುವ ಗಾಂಧೀಜಿಯವರ ಸ್ಮಾರಕ



ಅರಸೀಕೆರೆಯಲ್ಲಿರುವ ಯಶೋಧರಮ್ಮ ಅವರ ಸಮಾಧಿ



ಐತಿಹಾಸಿಕ ಲಾಲ್‌ಬಾಗ್ ಅಧಿವೇಶನದಲ್ಲಿ ಭಾಷಣ ಮಾಡುತ್ತಿರುವವರು ಮಾನ್ಯ ದೇವರಾಜ ಅರಸ್, ಕುಳಿತಿರುವವರಲ್ಲಿ (ಎಡದಿಂದ) ಯಶೋಧರಮ್ಮ ದಾಸಪ್ಪ, ಇಂದಿರಾ ಗಾಂಧಿ, ಎಂ.ವಿ. ಕೃಷ್ಣಪ್ಪ, ಸರೋಜಿನಿ ಮಹಿಷಿ ಹಾಗೂ ಕಾರ್ಯಕರ್ತರು



ಯಶೋಧರಮ್ಮ ದಾಸಪ್ಪ ಅವರು ಕುಟುಂಬದವರೊಂದಿಗೆ
ನಿಂತಿರುವವರಲ್ಲಿ (ಎಡದಿಂದ) ತುಳಸೀದಾಸಪ್ಪ, ಹೆಚ್.ಸಿ. ದಾಸಪ್ಪ,
ರಾಮದಾಸ್, ಕುರ್ಚಿಯಲ್ಲಿ ಕುಳಿತಿರುವವರಲ್ಲಿ (ಎಡದಿಂದ) ಸರೋಜಮ್ಮ,
ಯಶೋದರಮ್ಮ ದಾಸಪ್ಪ ಮತ್ತು ಗಿರಿಜಮ್ಮ, ಪ್ರಭ ಮತ್ತು ಮೊಮ್ಮಕ್ಕಳು

---

"ನೀವು ನಿರೀಕ್ಷಿಸುವುದಕ್ಕಿಂತ ಹೆಚ್ಚಾಗಿ ತ್ಯಾಗ ಮಾಡಬಲ್ಲೆ, ಬೇಕಾದರೆ ಪ್ರಾಣವನ್ನೇ ಸಮರ್ಪಿಸಬಲ್ಲೆ. ನೀವೊಬ್ಬರು ಆದರ್ಶವಾದಿಗಳು ಸಾರ್ವಜನಿಕ ವ್ಯಕ್ತಿಗಳು, ಜನೋದ್ಧಾರಕ್ಕೆ, ದೇಶೋದ್ಧಾರಕ್ಕೆಂದೇ ನೀವು ಹುಟ್ಟಿರಬೇಕು ಎನಿಸುತ್ತದೆ. ನಿಮ್ಮೆಲ್ಲಾ ವಿಚಾರಗಳಿಗೆ ಸಹಮತಳಾಗುತ್ತಾ ಹೋಗುವುದೇ ನನ್ನ ಕರ್ತವ್ಯ. ನಿಮ್ಮೆಲ್ಲಾ ಹೋರಾಟಗಳಲ್ಲಿ ಸಮಭಾಗಿಯಾಗಿ ಪಾಲ್ಗೊಳ್ಳುವೆ."

- ಕಸ್ತೂರ್‌ಬಾ

(ಮಹಾತ್ಮ ಜೀ ಅವರಿಗೆ ನೀಡಿದ ಆಶ್ವಾಸನೆ)

# ಗ್ರಂಥ ಋಣ

1. ಶ್ರೀಮತಿ ಬಿ.ಕಾಮಾಕ್ಷಮ್ಮ ಅವರ – ಶ್ರೀಮತಿ ಯಶೋಧರಮ್ಮ ದಾಸಪ್ಪ ಕೃತಿ
2. ಪ್ರೊ: ಜಿ.ಬಿ. ಶಿವರಾಜ್ ಅವರ – 'ಜನಪದ' ಪತ್ರಿಕೆಯಲ್ಲಿ ಪ್ರಕಟಗೊಂಡ ಬರಹ
3. ಯಶೋಧರಮ್ಮ ಅವರ ಮೂರನೆಯ ತಮ್ಮ ಆದಿನಾರಾಯಣಗೌಡರು ಹಾಗೂ ತಂದೆಯರಾದ ಹೆಚ್. ಜಯರಾಮ್ ಗೌಡರು ಸಹಪಾಠಿಗಳಾಗಿದ್ದರಿಂದ ಮಾಹಿತಿ ಸಂಗ್ರಹಕ್ಕೆ ನೆರವು.
4. ಕೆ.ಎಚ್. ರಾಮಯ್ಯ ಅವರ ಕುಟುಂಬ ಹಾಗೂ ನಮ್ಮ ತಾತಾ, ಬಿ. ತಾಯಪ್ಪ ಹಾಗು ತಂದೆ ಎಲ್ಲರೂ (ನಮ್ಮ ಕುಟುಂಬ) ಆಪ್ತ ಸ್ನೇಹಿತರು. ಆದುದರಿಂದ ಯಶೋಧರಮ್ಮ, ಅವರ ತಮ್ಮಂದಿರು ಹಾಗೂ ತಂಗಿಯರ ವಿಚಾರ ಸಾಮಾನ್ಯವಾಗಿ ನಮ್ಮ ಕುಟುಂಬ ವರ್ಗದವರಿಗೆ ಹೆಚ್ಚು ಪರಿಚಯವಿದ್ದುದರಿಂದ ಅನೇಕ ಕೌಟುಂಬಿಕ, ಸಾಮಾಜಿಕ, ಸಂಗತಿಗಳನ್ನು ಸಹಜವಾಗಿ ನಿರೂಪಿತವಾಗಿವೆ.



## ಲೇಖಕಿಯ ಕಿರು ಪರಿಚಯ

ಹೆಸರು : ಲೀಲ ವಾಸುದೇವ್

ಶಿಕ್ಷಣ : ಎಂ.ಎ, ಬಿ.ಇಡಿ.

ವೃತ್ತಿ : ನಿವೃತ್ತ ಪ್ರಾಂಶುಪಾಲರು

ವಯಸ್ಸು : 73 ವರ್ಷ

ಸಂಪರ್ಕ : ಮೊ. : 9972227346

ಆಸಕ್ತಿ :
- ತಂಜಾವೂರು ಶೈಲಿಯ ಚಿತ್ರ ರಚನೆ

ಪ್ರಕಟಣೆ :
- ಕನ್ನಡಪ್ರಭ ಪತ್ರಿಕೆಯ 'ಧರ್ಮ ಜ್ಯೋತಿ' ಬರಹದ ಕಿರುಹೊತ್ತಿಗೆ
- ಹವ್ಯಾಸಿ ಕವಿಯಿತ್ರಿ 'ಅಂಶುಮಾಲಿ' ಅಂಕಿತನಾಮ, 'ಭಾವನ ಬಿಂದು' ಪ್ರಕಟಿತ ಕವನ ಸಂಕಲನ
- 'ಮಕ್ಕಳ ಕಸ್ತೂರ ಬಾ' ಕಿರುಹೊತ್ತಿಗೆ

ಕಾರ್ಯಕ್ಷೇತ್ರ :
- ಕಾರ್ಯಕಾರಿ ಸಮಿತಿ ಸದಸ್ಯೆ, ದ ಬೆಂಗಳೂರು ಎಜುಕೇಶನ್ ಸೊಸೈಟಿ ವಿದ್ಯಾಸಂಸ್ಥೆ, ಮಲ್ಲೇಶ್ವರಂ
- ಟ್ರಸ್ಟಿ, ಗಾಂಧೀ ಸಾಹಿತ್ಯ ಸಂಘ, ಮಲ್ಲೇಶ್ವರಂ
- ನಿರ್ದೇಶಕರು, ಶ್ರೀ ರಾಮ ಕೋ–ಆಪರೇಟಿವ್ ಬ್ಯಾಂಕ್, ಮಲ್ಲೇಶ್ವರಂ
- ಟ್ರಸ್ಟಿ, ಸಿದ್ದವನಹಳ್ಳಿ ಕೃಷ್ಣಶರ್ಮ ಸ್ಮಾರಕ ಟ್ರಸ್ಟ್ ಮಲ್ಲೇಶ್ವರಂ
- ಅಜೀವ ಸದಸ್ಯರು, ಆಶ್ವಾಸನ್, ಚುಟುಕು ಸಾಹಿತ್ಯ – ಕೌಸ್ತುಭ ಮತ್ತು ಎಂ.ಇ.ಡಬ್ಲ್ಯು.ಎಸ್., ಮಲ್ಲೇಶ್ವರಂ

# ಗಾಂಧೀಜಿ ಅವರ ಜೀವನ ಘಟನಾವಳಿಗಳು

| | |
|---|---|
| ಪೋರಬಂದರದಲ್ಲಿ ಜನನ | 02.10.1869 |
| ಕಸ್ತೂರ್‌ಬಾರೊಂದಿಗೆ ವಿವಾಹ | 1881 |
| ಮೆಟ್ರಿಕ್ಯುಲೇಶನ್ ಉತ್ತೀರ್ಣರಾದದ್ದು | 1887 |
| ಶಿಕ್ಷಣಕ್ಕಾಗಿ ಇಂಗ್ಲೆಂಡಿಗೆ ಪ್ರಯಾಣ | 1888 |
| ಬ್ಯಾರಿಸ್ಟರರಾಗಿ ದಾಖಲಾತಿ | 1891 |
| ಮರಳಿ ಭಾರತಕ್ಕೆ | 1891 |
| ದಕ್ಷಿಣ ಆಫ್ರಿಕಾಕ್ಕೆ ಹಡಗಿನಲ್ಲಿ ಪ್ರಯಾಣ | 1893 |
| ಭಾರತ ಸಂದರ್ಶನ | 1896 ಮತ್ತು 1901 |
| ಭಾರತ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನದಲ್ಲಿ ಪಾಲ್ಗೊಂಡಿದ್ದು | 1901 |
| ಇಂಡಿಯನ್ ಒಪಿನಿಯನ್ ಪತ್ರಿಕೆಯ ಪ್ರಾರಂಭ | 1903 |
| ಫೀನಿಕ್ಸ್ ಆಶ್ರಮ ಸ್ಥಾಪನೆ | 1904 |
| ಬೋಯರ್ ಯುದ್ಧ ಮತ್ತು ಜೂಲು ದಂಗೆಯಲ್ಲಿ ಇಂಡಿಯನ್ ಅಂಬುಲೆನ್ಸ್‌ನ ಕೋರ್ ನೇತೃತ್ವ | 1899 ಮತ್ತು 1906 |
| ಬ್ರಹ್ಮಚರ್ಯ ವ್ರತ ಸ್ವೀಕಾರ | 1906 |
| ಇಂಗ್ಲೆಂಡಿಗೆ ಪ್ರಯಾಣ | 1906 ಮತ್ತು 1909 |
| ದಕ್ಷಿಣ ಆಫ್ರಿಕಾದಲ್ಲಿ ಪ್ರಥಮ ಜೈಲುವಾಸ | 1908 |
| ಟಾಲ್‌ಸ್ಟಾಯ್ ಆಶ್ರಮ ಸ್ಥಾಪನೆ | 1910 |
| ದಕ್ಷಿಣ ಆಫ್ರಿಕಾದಲ್ಲಿ ಚಾರಿತ್ರಿಕ ಸತ್ಯಾಗ್ರಹ ಆರಂಭ | 1913 |
| ಭಾರತಕ್ಕೆ ಆಗಮನ | 1915 |
| ಸಬರಮತಿ ಆಶ್ರಮ ಸ್ಥಾಪನೆ | 1915 |

| | |
|---|---|
| ಖೇಡಾದಲ್ಲಿ ಕರನಿರಾಕರಣೆ ಚಳುವಳಿ | 1918 |
| ಜಲಿಯನ್ ವಾಲಾಬಾಗ್ ಹತ್ಯಾಕಾಂಡ | 1919 |
| ಯಂಗ್ ಇಂಡಿಯಾ, ನವಜೀವನ ಪತ್ರಿಕೆಗಳ ಆರಂಭ | 1919 |
| ಅಸಹಕಾರ ಆಂದೋಲನ | 1921 |
| ಭಾರತದಲ್ಲಿ ಪ್ರಥಮ ಜೈಲುವಾಸ | 1922 |
| ಖಾದಿಗಾಗಿ ಪ್ರವಾಸ | 1927 |
| ಉಪ್ಪಿನ ಸತ್ಯಾಗ್ರಹ ಮತ್ತು ದಾಂಡೀಯಾತ್ರೆ | 1930 |
| ಯೂರೋಪು ಸಂದರ್ಶನ ಮತ್ತು ದುಂಡು ಮೇಜಿನ ಪರಿಷತ್ತು | 1931 |
| ಸೇವಾಗ್ರಾಮ ಆಶ್ರಮ ಸ್ಥಾಪನೆ | 1933 |
| ಹರಿಜನ ಸೇವೆಗಾಗಿ ನಿಧಿ ಸಂಗ್ರಹಣೆ | 1933 |
| ಹರಿಜನ್ ಸಾಪ್ತಾಹಿಕ ಪ್ರಾರಂಭ | 1933 |
| ನಯೀ ತಾಲೀಂ ಶಿಕ್ಷಣ ಪದ್ಧತಿ ಪ್ರಾರಂಭ | 1937 |
| “ಭಾರತ ಬಿಟ್ಟು ತೊಲಗಿ” ಚಳುವಳಿ | 1942 |
| ಕೊನೆಯ ಬಾರಿಗೆ ಆಗಾಖಾನ್ ಅರಮನೆಯಲ್ಲಿ ಸೆರೆವಾಸ | 1942–44 |
| ಹಂತಕನ ಗುಂಡೇಟಿಗೆ ಬಲಿ | 30–1–1948 |

# ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಪ್ರಕಟಣೆಗಳು

| | | |
|---|---|---|
| 1. | ಆರೋಗ್ಯ ರಹಸ್ಯ | 10–00 |
| 2. | ಕರ್ನಾಟಕದಲ್ಲಿ ಗಾಂಧೀ | 5–00 |
| 3. | ರಾಮನಾಮ | 6–00 |
| 4. | ಗಾಂಧೀ ಬಳಗದ ವಿದೇಶಿಯರು | 40–00 |
| 5. | ಆರೋಗ್ಯ | 8–00 |
| 6. | ಪ್ರಾರ್ಥನೆ | 8–00 |
| 7. | ಸತ್ಯಾಗ್ರಹ | 8–00 |
| 8. | ಮಹಿಳೆಯರಿಗಾಗಿ | 8–00 |
| 9. | ಪಂಚಾಯತ್ ರಾಜ್ | 12–00 |
| 10. | ಆದರ್ಶಗಳು | 12–00 |
| 11. | ನಮ್ಮ ಗಾಂಧೀ ತಾತ | 25–00 |
| 12. | ದೇವನಗರಿಯಲ್ಲಿ ಗಾಂಧೀ ಧ್ವನಿ | 2–00 |
| 13. | ನಮ್ಮ ಗಾಂಧೀ ತಾತ | 15–00 |
| 14. | ಹೋರಾಟ ಶ್ರೀ | 40–00 |
| 15. | ಮಹಾತ್ಮ ಗಾಂಧೀಜಿ ಅವರ ಜೀವನ ಮೈಲಿಗಲ್ಲುಗಳು | 3–00 |
| 16. | ಗಾಂಧೀಜಿ ಜೀವನ ಚರಿತ್ರೆ | 25–00 |
| 17. | ಕುವೆಂಪು ಕಂಡ ಗಾಂಧೀ | 25–00 |
| 18. | ಉಪ್ಪಿನ ಸತ್ಯಾಗ್ರಹ | 5–00 |
| 19. | ಹಿಂದ್ ಸ್ವರಾಜ್ | 50–00 |
| 20. | ಗಾಂಧೀ ಮತ್ತು ಆಧ್ಯಾತ್ಮಿಕ ಜೀವನ | 25–00 |
| 21. | ನನ್ನ ಕನಸಿನ ಭಾರತ | 30–00 |
| 22. | ಹಿಂದೂ ಧರ್ಮ | 25–00 |
| 23. | ಮಹಿಳೆಯರು | 30–00 |
| 24. | ಸ್ವಾತಂತ್ರ್ಯ | 25–00 |
| 25. | ಅಸ್ಪೃಶ್ಯತೆ | 30–00 |
| 26. | ಒಳ್ಳೆಯ ಜೀವನ | 25–00 |
| 27. | ಪ್ರಾರ್ಥನೆ | 25–00 |
| 28. | ಗಾಂಧೀ ಮತ್ತು ಕರ್ನಾಟಕ | 200–00 |
| 29. | ಸತ್ಯ | 30–00 |
| 30. | ವಿದ್ಯಾರ್ಥಿಗಳಿಗಾಗಿ | 30–00 |
| 31. | ಸರ್ವೋದಯ | 30–00 |

| | | |
|---|---|---|
| 32 | ಖಾದಿ ಗ್ರಾಮೋದ್ಯೋಗ | 30-00 |
| 33 | ನನ್ನ ಬಾಲ್ಯದ ನೆನಪುಗಳು | 30-00 |
| 34 | ಗ್ರಾಮರಾಜ್ಯ ಆವರ್ತ | 5-00 |
| 35. | ನನ್ನ ಕನಸಿನ ಸ್ವರಾಜ್ಯ | 5-00 |
| 36. | ಗಾಂಧೀ ಮತ್ತು ಹಾಸ್ಯ | 20-00 |
| 37. | ನನ್ನ ಆದರ್ಶಗ್ರಾಮ | 5-00 |
| 38. | ಮಹಾತ್ಮ ಗಾಂಧೀ ವಿಚಾರಗಳು ಹಾಗೂ ವ್ಯವಸ್ಥಾಪನ ಪದ್ಧತಿ | 48-00 |
| 39. | ಸತ್ಯಾಗ್ರಹ | 40-00 |
| 40. | ಗ್ರಾಮದಾನ ಗ್ರಾಮ ಸ್ವರಾಜ್ಯ | 25-00 |
| 41. | ಗಾಂಧೀಜಿಯವರ ಪ್ರಾತಃ ಸಾಯಂ ಪ್ರಾರ್ಥನೆ ಮತ್ತು ಭಜನೆ | |
| 42. | ಉಪ್ಪಿನ ಸತ್ಯಾಗ್ರಹ ಮತ್ತು ಮೈಲಾರ ಮಹಾದೇವ | 5-00 |
| 43. | ಸತ್ಯಾಗ್ರಹ | 5-00 |
| 44. | ಹಿಂದ್ ಸ್ವರಾಜ್ | 5-00 |
| 45. | ಆರೋಗ್ಯ | 5-00 |
| 46 | ಮಹಾತ್ಮ ಗಾಂಧಿ ಪ್ರಸ್ತುತತೆ | 10-00 |
| 47. | ಬಹುರೂಪಿ ಗಾಂಧಿ | 10-00 |
| 48. | ನಂದಿ ಗಿರಿಧಾಮದಲ್ಲಿ ಮಹಾತ್ಮ ಗಾಂಧಿ | 30-00 |
| 49. | ಕೃತಯುಗಿ ವಿನೋಬಾ ಭಾವೆ | 15-00 |
| 50. | ಮೋಹನ ತರಂಗ | 40-00 |
| 51. | ನಮ್ಮ ಗಾಂಧಿ ತಾತ | 5-00 |
| 52. | ಗೀತಾ ಪ್ರವಚನ | 80-00 |
| 53. | ಜೆ.ಪಿ. ಜೀವನ ಹಾದಿ | 45-00 |
| 54. | ಗಣ್ಯರು ಕಂಡಂತೆ ಗಾಂಧಿ | 20.0 |
| 55. | ಗೀತಾಮಾತೆ | 80.00 |
| 56. | Temple & Mosque | 10-00 |
| 57. | Rastrapita Mahatma Gandhi | 25-00 |
| 58. | Swarajya of Dreams | 5-00 |
| 59. | Gandhi My Grand Father | 5-00 |
| 60. | Grand Pa Gandhi | 5-00 |
| 61. | Relevance of Gandhi | 20-00 |
| 62. | Vinoba age of the sage | 20.00 |

## ಕರ್ನಾಟಕದಲ್ಲಿ ಗಾಂಧೀಜಿ ಭೇಟಿ ನೀಡಿದ ಸ್ಥಳಗಳು

| | |
|---|---|
| ● ಬೆಂಗಳೂರು | ದಿ. 08-05-1915 |
| ● ಬೆಳಗಾವಿ | ದಿ. 27-04-1916 ರಿಂದ<br>ದಿ. 01-05-1916 ರವರೆಗೆ |
| ● ಬಿಜಾಪುರ | ದಿ. 05-05-1918 ರಿಂದ<br>ದಿ. 06-05-1918 ರವರೆಗೆ |
| ● ಕಾಸರಗೋಡು | ದಿ. 19-08-1920 |
| ● ಮಂಗಳೂರು | ದಿ. 20-08-1920 |
| ● ಬೆಂಗಳೂರು | ದಿ. 21-08-1920 |
| ● ನಿಪ್ಪಾಣಿ, ಚಿಕ್ಕೋಡಿ, ಹುಕ್ಕೇರಿ ಸಂಕೇಶ್ವರ, ಬೆಳಗಾವಿ | ದಿ. 08-11-1920 |
| ● ಬೆಳಗಾವಿ ಶಹಾಪುರ ಖಾನಾಪುರ, ನಂದಗಢ ಹಳ್ಯಾಳ | ದಿ. 09-11-1920 |
| ● ಧಾರವಾಡ | ದಿ. 10-11-1920 |
| ● ಹುಬ್ಬಳ್ಳಿ, ಗದಗ | ದಿ. 11-11-1920 |
| ● ಸಾಂಗಲಿ | ದಿ. 12-11-1920 |
| ● ಬಾಗಲಕೋಟೆ | ದಿ. 27-05-1921 |
| ● ಬಿಜಾಪುರ, ಸೊಲ್ಲಾಪುರ | ದಿ. 28-05-1921 |
| ● ಬಳ್ಳಾರಿ | ದಿ. 30-05-1921 |
| ● ಬೆಳಗಾವಿ | ದಿ. 21-12-1924 ರಿಂದ<br>ದಿ. 30-12-1924 ರವರೆಗೆ |
| ● ಗುಲ್ಬರ್ಗಾ | ದಿ. 22-02-1927 |
| ● ನಿಪ್ಪಾಣಿ | ದಿ. 28-03-1927 ರಿಂದ<br>ದಿ. 30-12-1924 ರವರೆಗೆ |

| | |
|---|---|
| ● ಬೆಳಗಾವಿ | ದಿ. 19-04-1027 ರಿಂದ<br>ದಿ. 20-04-1927ರವರೆಗೆ |
| ● ಬೆಂಗಳೂರು | ದಿ. 06-06-1927 ರಿಂದ<br>ದಿ. 13-07-1927 ರವರೆಗೆ |
| ● ತುಮಕೂರು | ದಿ. 14-07-1927 |
| ● ತುಮಕೂರು, ಮಧುಗಿರಿ | ದಿ. 15-07-1927 |
| ● ತುಮಕೂರು | ದಿ. 16-07-1927 |
| ● ಬೆಂಗಳೂರು | ದಿ. 17-07-1927 |
| ● ಬೆಂಗಳೂರು | ದಿ. 18-07-1927 |
| ● ಕೃಷ್ಣರಾಜಸಾಗರ, ಯಡತೊರೆ<br>ಶ್ರೀರಂಗಪಟ್ಟಣ | ದಿ. 19-07-1927 |
| ● ಮೈಸೂರು | ದಿ. 22-07-1927 |
| ● ಬೆಂಗಳೂರು | ದಿ. 12-07-1927 ರಿಂದ<br>ದಿ. 30-07-1927 ರವರೆಗೆ |
| ● ಕ್ಲೊಸ್‌ಪೇಟೆ (ರಾಮನಗರ) | ದಿ. 31-07-1927 |
| ● ಕಾನಕನಹಳ್ಳಿ (ಕನಕಪುರ) | |
| ● ಬೆಂಗಳೂರು | ದಿ. 01-08-1927 |
| ● ಅರಸೀಕರೆ, ಹಾಸನ | ದಿ. 02-08-1927 |
| ● ಹಾಸನ | ದಿ. 03-08-1927 |
| ● ಹಾಸನ, ಹೊಳೆನರಸೀಪುರ | ದಿ. 04-08-1927 |
| ● ಬೆಂಗಳೂರು | ದಿ. 05-08-1927 ರಿಂದ<br>ದಿ. 11-08-1927 ರವರೆಗೆ |
| ● ದಾವಣಗೆರೆ | ದಿ. 12-08-1927 |
| ● ಹರಿಹರ, ಹೊನ್ನಾಳಿ<br>ಮಲೆಬೆನ್ನೂರು | ದಿ. 13-08-1927 |

| | |
|---|---|
| ● ಶಿವಮೊಗ್ಗ | ದಿ. 15-08-1927 |
| ● ಆಯನೂರು, ಕುಂಸಿ, ಸಾಗರ<br>ಶಿವಮೊಗ್ಗ, ತೀರ್ಥಹಳ್ಳಿ<br>ಮಂದಗದ್ದೆ, ರಾಜನೂರು | ದಿ. 17-08-1927 |
| ● ಶಿವಮೊಗ್ಗ | ದಿ. 15-08-1927 |
| ● ಭದ್ರಾವತಿ, ತರೀಕೆರೆ | ದಿ. 18-08-1927 |
| ● ಬೀರೂರು, ಕಡೂರು | |
| ● ಚಿಕ್ಕಮಗಳೂರು | ದಿ. 19-08-1927 |
| ● ಬೇಲೂರು, ಹಳೇಬೀಡು | ದಿ. 20-08-1927 |
| ● ಅರಸೀಕರೆ | |
| ● ತಿಪಟೂರು | ದಿ. 21-08-1927 |
| ● ಬೆಂಗಳೂರು | ದಿ. 22-08-1927 |
| ● ಬೆಂಗಳೂರು | ದಿ. 23-08-1927 |
| ● ಹೊಸೂರು, ಸೂಳಗಿರಿ<br>ಕೃಷ್ಣಗಿರಿ | ದಿ. 24-08-1927 |
| ● ಬೆಂಗಳೂರು | ದಿ. 25-08-1927 ರಿಂದ<br>ದಿ. 30-08-1927 ರವರೆಗೆ |
| ● ಹಿಂದೂಪುರ, ವಿಧುರಾಶ್ವಥ<br>ಗೌರಿಬಿದನೂರು<br>ದೊಡ್ಡಬಳ್ಳಾಪುರ, ತುಮಕೂರು<br>ತ್ಯಾಮಗೊಂಡ್ಲು, ನೆಲಮಂಗಲ<br>ಬೆಂಗಳೂರು, ಮೈಸೂರು | ದಿ. 04-01-1934 |
| ● ತಗಡೂರು, ಬದನವಾಳು<br>ನಂಜನಗೂಡು, ಮೈಸೂರು | ದಿ. 05-01-1934 |
| ● ಮಂಡ್ಯ, ರಾಮನಗರ<br>ಕನಕಪುರ, ಬಿಡದಿ, ಕೆಂಗೇರಿ | ದಿ. 06-01-1934 |

- ಸೊಂಡೂರು, ಬಳ್ಳಾರಿ, ಹೊಸಪೇಟೆ ದಿ. 03-03-1934
  ಭಾವಾಪುರ, ಗದಗ, ಜಕ್ಕಲಿ, ಹುಬ್ಬಳ್ಳಿ

- ಹುಬ್ಬಳ್ಳಿ, ಧಾರವಾಡ, ಅಮ್ಮಿನಭಾವಿ ದಿ. 04-03-1934
  ಹಿರೇಉಳ್ಳಗೇರಿ, ಬೈಲಹೊಂಗಲ
  ಉಪ್ಪಿನ, ಬೆಟಗೇರಿ, ಸೌಂದತ್ತಿ
  ಸಂಪಗಾಂವ್, ಹೊಸೂರು, ಬೆಳಗಾವಿ
- ಬೆಳಗಾವಿ ದಿ. 05-03-1934
- ಬೆಳಗಾವಿ ದಿ. 06-03-1934
- ಬೆಳಗಾವಿ, ಯಮಕನಮರಡಿ ದಿ. 07-03-1934
  ಹುಕ್ಕೇರಿ, ಗೋಕಾಕ, ಸಂಕೇಶ್ವರ
  ನವಲೀಹಾಳ, ಚಿಕ್ಕೋಡಿ, ಅಂಕಲಿ
  ಶೆಡಬಾಳ, ಬನಹಟ್ಟಿ, ಅಥಣಿ
  ಬಿಜಾಪುರ, ತಿಕೋಟ, ತೊರವಿ
  ಇಳಕಲ್
- ನಂದಿ ಬೆಟ್ಟ 10-05-1936 ರಿಂದ
  30-05-1936 ರವರೆಗೆ
- ಚಿಕ್ಕಬಳ್ಳಾಪುರ, ಚಿಂತಾಮಣಿ 31-05-1936
  ಕೋಲಾರ, ಬಂಗಾರ ಪೇಟೆ, ಕೆ.ಜಿ.ಎಫ್
- ಬೆಂಗಳೂರು 01-06-1936 ರಿಂದ
  12-06-1936 ರವರೆಗೆ
- ಬೆಳಗಾವಿ ಜಿಲ್ಲೆಯ ಹುದಲಿ 16-04-1936 ರಿಂದ
  21-04-1937ರವರೆಗೆ

## ಏಕಾದಶ ವ್ರತಗಳು

| | |
|---|---|
| ಸತ್ಯ | Truth |
| ಅಹಿಂಸೆ | Ahimsa or Love |
| ಅಸ್ತೇಯ (ಕದಿಯದಿರುವುದು) | Non-Stealing |
| ಬ್ರಹ್ಮಚರ್ಯ | Brahmacharya or Chastity |
| ಅಸಂಗ್ರಹ (ಅಪರಿಗ್ರಹ) | Non-Possession |
| ಶರೀರ ಶ್ರಮ | Physical Labour |
| ಅಸ್ವಾದ (ನಾಲಿಗೆ ಚಪಲ) | Control on the Palate |
| ಸರ್ವತ್ರ ಭಯವರ್ಜನ (ಅಭಯ) | Fearlessness |
| ಸರ್ವಧರ್ಮ ಸಮಾನತ್ವ | Equality of Religion |
| ಸ್ವದೇಶಿ | Swadeshi |
| ಸ್ಪರ್ಶ ಭಾವನೆ (ಅಸ್ಪೃಶ್ಯತಾ ನಿವಾರಣೆ) | Removal of Untouchability |

---

## ಏಳು ಸಾಮಾಜಿಕ ಪಾತಕಗಳು Seven Social Sins

| | |
|---|---|
| ತತ್ವರಹಿತ ರಾಜಕಾರಣ | Politics without Principles |
| ದುಡಿಮೆ ಇಲ್ಲದ ಸಂಪತ್ತು | Wealth without Work |
| ಆತ್ಮಸಾಕ್ಷಿ ಇಲ್ಲದ ಸಂತೋಷ | Pleasure without Conscience |
| ಚಾರಿತ್ರ್ಯವಿಲ್ಲದ ಶಿಕ್ಷಣ | Education without Character |
| ನೀತಿ ಇಲ್ಲದ ವ್ಯಾಪಾರ | Commerce without Morality |
| ಮಾನವೀಯತೆ ಇಲ್ಲದ ವಿಜ್ಞಾನ | Science without Humanity |
| ತ್ಯಾಗ ಇಲ್ಲದ ಪೂಜೆ | Worship without Sacrifice |

– ಮಹಾತ್ಮ ಗಾಂಧೀಜಿ

# ಹದಿನೆಂಟು ರಚನಾತ್ಮಕ ಕಾರ್ಯಗಳು
# 18 CONSTRUCTIVE PROGRAMMES

| | |
|---|---|
| ಮತೀಯ ಐಕ್ಯತೆ | **Communal Unity** |
| ಅಸ್ಪೃಶ್ಯತಾ ನಿವಾರಣೆ | **Removal of Untouchability** |
| ಪಾನನಿರೋಧ | **Prohibition** |
| ಖಾದಿ | **Khadi** |
| ಇತರೆ ಗ್ರಾಮೋದ್ಯೋಗ | **Other village industries** |
| ಗ್ರಾಮ ನೈರ್ಮಲ್ಯ | **Village Sanitation** |
| ಮೂಲ ಶಿಕ್ಷಣ | **Basic Education** |
| ವಯಸ್ಕರ ಶಿಕ್ಷಣ | **Adult Education** |
| ಮಹಿಳಾ ಸಬಲೀಕರಣ | **Women Empowerment** |
| ಆರೋಗ್ಯ ಮತ್ತು ಶುಚಿತ್ವ ಶಿಕ್ಷಣ | **Hygiene & Health Education** |
| ಪ್ರಾದೇಶಿಕ ಭಾಷೆ | **Provincial Languages** |
| ರಾಷ್ಟ್ರಭಾಷೆ | **National Language** |
| ಆರ್ಥಿಕ ಸಮಾನತೆ | **Economic Equality** |
| ರೈತರ ಸಬಲೀಕರಣ | **Empowerment of Farmers** |
| ಕಾರ್ಮಿಕರ ಸಬಲೀಕರಣ | **Empowerment of Labours** |
| ಆದಿವಾಸಿ ಸಬಲೀಕರಣ | **Tribal Empowerment** |
| ಕುಷ್ಠರೋಗ ನಿರ್ಮೂಲನೆ | **Cure of Leprocy** |
| ವಿದ್ಯಾರ್ಥಿ | **Students** |

"ಯಶೋಧರಾ ತುಂ ಗಂಗಾ ಬನ್ ಗಯೀ"

- ಆಚಾರ್ಯ ಕೃಪಲಾನಿ

ಗಾಂಧೀಜಿ ಅವರ ಅನುಯಾಯಿಯಾಗಿ ವಾರ್ಧಾ ಆಶ್ರಮದಲ್ಲಿ ಸೇವೆಯ ಪಣತೊಟ್ಟು, ಸರಳ ಶಿಸ್ತಿನ ಜೀವನಕ್ಕೆ ತಾನೇ ನಿದರ್ಶನವಾಗುತ್ತಾ, ಸಮಾಜ ಪರಿವರ್ತನಾ ಕಾರ್ಯದಲ್ಲಿ ಅಜೀವ ಪರ್ಯಂತ ದುಡಿದ ಯಶೋದರಮ್ಮ ಅವರ ಜೀವನ ಸರ್ವರಿಗೂ ಮಾದರಿಯಾಗಿದೆ.

- ಡಾ. ವೂಡೇ ಪಿ. ಕೃಷ್ಣ

ಸಾಮಾಜಿಕವಾಗಿ ತ್ಯಾಗ, ನಿಸ್ವಾರ್ಥತೆಯ ಬದುಕು, ಶೈಕ್ಷಣಿಕವಾಗಿ ಹಲವು ಪ್ರಥಮಗಳ ಅಧ್ವರ್ಯರು, ಭಾರತದ ಸ್ವಾತಂತ್ರ್ಯ ಹೋರಾಟದ ಅಪ್ರತಿಮ ಮಹಿಳೆಯಾಗಿರುವ ಯಶೋದರಮ್ಮ ಇವರ ಜೀವನ ಕರ್ನಾಟಕದ ಇತಿಹಾಸದ ಪುಟಗಳನ್ನು ಅವಿಸ್ಮರಣೀಯಗೊಳಿಸಿದೆ.

- ಇಂದಿರಾ ಕೃಷ್ಣಪ್ಪ

ಕರ್ನಾಟಕ ಗಾಂಧೀ ಸ್ಮಾರಕ ನಿಧಿ
ಗಾಂಧೀ ಭವನ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು